ಟಿ. ಯಂ. ಪಿ. ದಾಸ ಗ್ರಂಥಮಾಲಾ

# ನನಿಂದ ತಿಳಿದುಕೊ

(ಎಂಬ ಸಾಮಾಜಿಕ ಕಾದಂಬರಿ)

? ?
?

ಜಿ. ನರಸಿಂಹದಾಸ್

ಎಸ್ ಟಿ. ಎಂ. ಪಿ. ದಾಸ್ ಅಂಡ್ ಕಂಪೆನಿ



November 1930

# ನನ್ನಿಂದ ತಿಳಿದುಕೊ?



## ಪ್ರಥಮ ಪರಿಚ್ಛೇದ



ತಂದೆಯ ಪ್ರೀತಿ - ಮಗನ ಮೂರ್ಖತ್ವ



ಬೇಸಿಗೆ ಕಾಲದ ಮಟಮಟ ಮಧ್ಯಾಹ್ನದ ಸಮಯ. ಸುಮಾರು ೧೨ ಘಂಟೆಯಾಗಿರಬಹುದು. ಬಿಸಿಲಿನ ತಾಪವು ವಿಪರೀತವಾಗಿದೆ. ಸೂರ್ಯದೇವನ ಪ್ರಚಂಡವಾದ ಕಿರಣಗಳು ನೇರವಾಗಿ ಭೂಮಿಯ ಮೇಲೆ ಬಿದ್ದು ಕಾಲಿಟ್ಟರೆ ಸುಡುವಂತೆ ಮಾಡಿದೆ ಜನಸಂಚಾರವು ಅಪರೂಪ. ಅದರಲ್ಲಿಯೂ ದೊಡ್ಡ ಪಟ್ಟಣದ ರಸ್ತೆ. ಕೀಲೆಣ್ಣೆಯನ್ನು ಬಳಿದಿದ್ದಾರೆ (Tar Road). ಕಾಲಿಗೆ ಅಲ್ಲಲ್ಲಿ ಅಂಟಿಕೊಳ್ಳುತ್ತೆ. ಹಕ್ಕಿಪಕ್ಷಿಗಳೊಂದೂ ತಮ್ಮ ಆವಾಸಸ್ಥಾನ (ಮರ-ಗಿಡ) ವನ್ನು ಬಿಟ್ಟು ಬರುವಂತಿಲ್ಲ. ಹೀಗಿರಲು ಯಾರು ತಾನೇ ಮನೆಯನ್ನು ಬಿಟ್ಟು ಈಚೆಗೆ ಬರುವರು. ಗಿರಾಕಿಗಳೇ ಇಲ್ಲದಿದ್ದ ಮೇಲೆ ಅಂಗಡಿಯಲ್ಲಿ ವ್ಯಾಪಾರವು ಹೇಗಾಗುವುದು ?

ಕಾರ್ನ್‌ವಾಲೀಸ್ ರಸ್ತೆ (Carnwallis Road) ಯು ಬಹು ದೊಡ್ಡದು. ವ್ಯಾಪಾರಸ್ಥಳ. ಯಾವಾಗ್ಯೂ ಜನಗಳು ಗುಂಪುಗುಂಪಾಗಿ ಇದ್ದೇ ಇರುವರು. ಅದರಲ್ಲೂ ಪ್ರಾತಃಕಾಲ ಸಂಧ್ಯಾಕಾಲಗಳಲ್ಲಂತೂ ದಾರಿಯಲ್ಲಿ ನಡೆಯುವುದೇ ಕಷ್ಟ. ರಸ್ತೆಯ ಎರಡೂ ಪಕ್ಕಗಳಲ್ಲಿ ವಿಧವಿಧವಾದ ಅಂಗಡಿಯ ಮಳಿಗೆಗಳು, ೩-೪ ಅಂತಸ್ತುಗಳುಳ್ಳ ಗಗನಚುಂಬಿತವಾದ ಅನೇಕ ಸೌಧಗಳು ಎರಡೂ ಕಡೆಯೂ ಕಟ್ಟಿದೆ. ಬೆಳ್ಳಿ, ಭಂಗಾರ, ವಜ್ರಗಳಿಂದೊಡಗೂಡಿದ ಸರಾಫ್ ಮಳಿಗೆಗಳು ಕೆಲವು. ರತ್ನಪಡಿ ವ್ಯಾಪಾರದ ಮಳಿಗೆಗಳು ಕೆಲವು. ಫ್ಯಾನ್ಸಿ ಸಾಮಾನು

ಗಳ ಅಂಗಡಿಗಳು ಕೆಲವು. ರೇಷ್ಮೆ ಉಲ್ಲನ್ ಮೊದಲಾದ ಬಟ್ಟೆಗಳ ಅಂಗಡಿಗಳು ಕೆಲವು. ದಿನಸಿನ ಅಂಗಡಿಗಳು ಕೆಲವು. ಪಾತ್ರೆ ಅಂಗಡಿಗಳು ಕೆಲವು. ಅಂತೂ ಆ ದೊಡ್ಡದಾದ ರಸ್ತೆಯ ಎರಡೂ ಭಾಗವು ತರಹೇವಾರಿ ಅಂಗಡಿಗಳುಳ್ಳದಾಗಿತ್ತೆಂದರೆ ಸಾಕು.

ಈ ಕಾರ್ನವಾಲೀಸ್ ರಸ್ತೆಯ ಮಧ್ಯಭಾಗದಲ್ಲಿ ಒಂದು ದೊಡ್ಡದಾದ ಳ ಅಂತಸ್ತಿನ ಅಂಗಡಿ ಮಳಿಗೆಯೊಂದಿತ್ತು. ಇದು ಒಂದೇ ತರಹ ಅಂಗಡಿಯೆಂದು ಹೇಳುವುದಕ್ಕಾಗುತ್ತಿರಲಿಲ್ಲ. ಒಂದು ಕಡೆ ರೇಷ್ಮೆ, ಉಣ್ಣೆ, ಮೊದಲಾದ ಒಟ್ಟೆಗಳು, ಮತ್ತೊಂದು ಭಾಗದಲ್ಲಿ ಜವಳಿ, ಇನ್ನೊಂದು ಕಡೆ ಗಾಜಿನ ಸಾಮಾನು ಮೊದಲಾದದ್ದು, ಒಂದು ಭಾಗದಲ್ಲಿ ಬೆಳ್ಳಿ, ಭಂಗಾರದ ನಗಗಳ ವ್ಯಾಪಾರ ಒಂದು ಕಡೆ. ಅಂತೂ ಅನೇಕ ಶಾಖೆಗಳನ್ನೊಳಗೊಂಡಿದ್ದಾಗಿತ್ತು. ಇಂತಹ ಭಾರೀ ವ್ಯಾಪಾರವನ್ನೊಳಗೊಂಡಿದ್ದು, ಅದರ ಲಾಭನಷ್ಟಗಳನ್ನು ಪರಿಶೀಲಿಸಿ ಯಜಮಾನನಿಗೆ ತಿಳಿಯಪಡಿಸಲೋಸುಗ ಅನೇಕ ಗುಮಾಸ್ತರು ಲೆಖ್ಖಪತ್ರಗಳನ್ನು ಬರೆಯುತ್ತಾ ಸೌಧದ ಒಂದಂತಸ್ತಿನಲ್ಲಿದ್ದಾರೆ. ಅಂಗಡಿಯ ವ್ಯಾಪಾರಕ್ಕೆ ಬೇಕಾಗುವ ಅನೇಕ ತರಹ ನಗನಾಣ್ಯಗಳನ್ನು ಮಾಡಿ ಒದಗಿಸುವ ಸಲುವಾಗಿ ಅನೇಕ ಜನ ಚಿನ್ನ ಬೆಳ್ಳಿ ಕೆಲ್ಸಗಾರರು ಮತ್ತೊಂದರಲ್ಲಿ ಕೆಲಸ ಮಾಡುತ್ತಿದ್ದಾರೆ. ಮೇಲ್ಭಾಗದ ಅಂತಸ್ತಿನಲ್ಲಿ ಅಂಗಡಿಯ ಯಜಮಾನನ ಕಚೇರಿ (ಆಫೀಸ್ ರೂಂ) ಯಂತೇರ್ಪಡಿಸಿದೆ. ಇದರೊಳಗೆ ಓರ್ವ ವೃದ್ಧನು ಏನನ್ನೋ ಯೋಚಿಸುತ್ತಾ ಕೆಲವು ವೇಳೆ ಮೇಜಿನಮೇಲಿದ್ದ ತನ್ನ ಮಗನ ಚಿತ್ರಪಟವೊಂದನ್ನು ನೋಡಿ ನಿಟ್ಟುಸಿರುಬಿಡುತ್ತಾ ಕುರ್ಚಿಯಮೇಲೆ ಕೂತಿದ್ದಾನೆ. ಹೊರಗಡೆ ಝಳಝಳ ಬಿಸಿಲು ಕಾದು ಮುದುಕನಿಗೆ ಒಂದು ಕಡೆ ಧಗೆ ಹತ್ತಿದೆ. ಮತ್ತೊಂದು ಕಡೆ ಮನೋಚಿಂತೆಯೊಂದು ಸುಡುತ್ತಿದೆ ಕೈಗಡಿಯಾರವನ್ನು ನೋಡಿದನು. ಒಂದು ಘಂಟೆಯಾಗಿತ್ತು. ಕಿಟಕಿಯ ಸಮೀಪಕ್ಕೆ ಬಂದು ಬೀದಿಯ ಕಡೆ ಬಗ್ಗಿ ನೋಡಿದನು. ಪುನಃ ಖಿನ್ನನಾಗಿ ಕುರ್ಚಿಯ ಮೇಲೆ ಕೂತನು. ಇವನ ಆಗಿನ ಮುಖಲಕ್ಷಣದಿಂದ ಯಾರಿಗಾಗಿಯೋ ಕಾದಿರುವಂತಿತ್ತು.

ಇಷ್ಟರಲ್ಲಿ ಮೋಟಾರು ಶಬ್ದವಾಯಿತು. ಶೀಘ್ರದಿಂದ ಮುದುಕನು ಕಿಟಕಿಯ ಬಳಿಗೆ ಬಂದನು. ಮುಖವು ಪ್ರಫುಲ್ಲವಾಯಿತು. ಅಷ್ಟರಲ್ಲಿ ಮೋಟಾರಿನಿಂದಿಳಿದು ಓರ್ವ ಹದಿನೆಂಟು ವರ್ಷದ ಯುವಕನು ತಂದೆಯ ಕೋಣೆಗೆ ಬಂದನು. ಮಗನನ್ನು ತಬ್ಬಿಕೊಂಡು—ಶ್ಯಾಮು, ಇಂದೇಕೆ ಇಷ್ಟು ಹೊತ್ತು ಮಾಡಿದೆ. ಇರಲಿ, ಇಂದಿನ ಲೆಕ್ಕವನ್ನು ನೋಡಿದರೆ ವ್ಯಾಪಾರವೇ ಇಲ್ಲದಂತಾಗಿದೆ. ಕಾರಣ ತಿಳಿಯದು ನಾನಾದರೋ ವೃದ್ಧನಾದೆ. ನೀನಿನ್ನೂ ಹುಡುಗ.

ಈಗಿನಿಂದಲೂ ಕಷ್ಟಪಟ್ಟು ವ್ಯಾಪಾರ ವಿಷಯಗಳಲ್ಲಿ ಪ್ರವೀಣನಾಗದಿದ್ದರೆ ಮುಂದೆ ಬಹು ಕಷ್ಟ. ಓದುವುದನ್ನೂ (ವಿದ್ಯಾಭ್ಯಾಸ) ಬಿಟ್ಟೆ. ವ್ಯಾಪಾರಕ್ಕಾದರೋ ಬುದ್ಧಿಯಿಲ್ಲ. ಇಂತಹ ಮೂರ್ಖಶಿರೋಮಣಿಯಾದ ನಿನ್ನನ್ನು ಹೊಂದಿ ಏನು ಸುಖಪಡಲಿ. ಹಾಳು ದುಷ್ಟ ಸಹವಾಸ. ನೀನಿಲ್ಲದಿರುವ ವೇಳೆ ಈ ನಿನ್ನ ಚಿತ್ರಪಠವನ್ನು ನೋಡಿ ನೋಡಿ, ನಿನ್ನ ಅವಿವೇಕತನಕ್ಕಾಗಿ ಕೊರಗುವೆನು. ಇನ್ನು ಮೇಲೆಯಾದರೂ ನಾನು ಹೇಳಿದಂತೆ ಕೇಳಿ ಅದರಂತೆ ಒಳ್ಳೆಯ ಮಾರ್ಗದಲ್ಲಿ ನಡಿ ಇಂತಹ ಭಾರೀ ವ್ಯಾಪಾರದ ಮಳಿಗೆಯ ಯಜಮಾನನಾಗುವಿ. ಇನ್ನು ನಾನು ಮನೆಗೆ ಹೋಗಿ ಊಟ ಮಾಡಿ ಬರುವೆನು ಎಂದು ಹೇಳಿ ಕೋಣೆಯಿಂದ ಹೊರಟು ಹೊರಗೆ ಸಿದ್ಧವಾಗಿ ನಿಂತಿದ್ದ ಮೋಟಾರಿನಲ್ಲಿ ಕೂತು ಮನೆಗೆ ಬಂದನು.

ಪ್ರತಿದಿನವೂ ಶ್ಯಾಮಣ್ಣನು ಅಂಗಡಿಗೆ ಬಂದಮೇಲೆ ತಂದೆಯು ಮನೆಗೆ ಹೋಗಿ ಊಟವನ್ನು ಪೂರೈಸಿಕೊಂಡು ಬರುತ್ತಿದ್ದನು. ಇಂದು ಶ್ಯಾಮಣ್ಣನು ಕಾಲಮೀರಿ ಬಂದಿದ್ದರಿಂದ ತಂದೆಯು ಇಷ್ಟು ಬುದ್ಧಿವಾದವನ್ನು ಮಗನಾದ ಶ್ಯಾಮುಗೆ ತಿಳಿಸಿದನು. ತಂದೆಯ ಹೆಸರು ಕೇಶವರಾವ್.

ಕೇಶವರಾಯರು ಭಾರೀ ಸಾಹುಕಾರರು. ಸ್ಥಿರಚರ ಆಸ್ತಿಗಳುಳ್ಳವರಾಗಿದ್ದರು. ವ್ಯಾಪಾರದಲ್ಲಿ ಬಹು ಆಸಕ್ತಿ. ಶೃಂಗಾರಪುರದ ಭಾರೀ ವರ್ತಕರೂ ಐಶ್ವರ್ಯವಂತರೂ ಯಾರೆಂದು ಕೇಳಿದರೆ ಇವರ ಹೆಸರನ್ನೇ ಹೇಳುತ್ತಿದ್ದರು. ಇಷ್ಟು ಐಶ್ವರ್ಯದಿಂದ ಕೂಡಿದ್ದರೂ ಲೋಭಿತನವಿರಲಿಲ್ಲ. ಬಹು ಧರ್ಮಿಷ್ಠರು. ಜಾತಿ, ಮತ, ಕೋಮು ಇವುಗಳ ಭೇದವಿಲ್ಲದೆ ತಮ್ಮ ಕೈಲಾದಮಟ್ಟಿಗೂ ಇತರರಿಗೆ ಸಹಾಯ ಮಾಡುತ್ತಿದ್ದರು ಅನೇಕ ಜನ ವಿದ್ಯಾರ್ಥಿಗಳಿಗೆ ಅನ್ನಾಹಾರಾದಿಗಳನ್ನು ಹಾಕಿ ವಿದ್ಯಾದಾನವನ್ನೂ ಮಾಡುತ್ತಿದ್ದರು. ಮದುವೆ ಮುಂಜಿಗಳೆಂದು ಬಡವರು ಬಂದು ಯಾಚಿಸಿದರೆ ತಮ್ಮ ಶಕ್ತಿಮೀರಿ ಸಹಾಯ ಮಾಡುತ್ತಿದ್ದರು. ಪುರದ ಸರ್ವಜನರಿಂದಲೂ ಗೌರವಿಸಲ್ಪಡುತ್ತಿದ್ದರು. ಇಷ್ಟೂ, ಅವರಿಗೆ ಯಾತರ ಪ್ರಭಾವ ? ವಿದ್ಯಾ, ಅದಕ್ಕೆ ತಕ್ಕ ಬುದ್ಧಿ. ಐಶ್ವರ್ಯ ಅದಕ್ಕೆ ತಕ್ಕ ವೆಚ್ಚ (ಉದಾರಬುದ್ಧಿ ಮತ್ತು ಮಿತವ್ಯಯ), ಕಷ್ಟಸಹಿಷ್ಣುತೆ ಇವುಗಳಿಂದಲ್ಲವೇ ? ತಮ್ಮ ಚಿಕ್ಕಪ್ಪನ ಮಗನಾದ ಶಂಕರರಾವ್ ಎಂಬುವವನನ್ನು ತಮ್ಮ ಮನೆಯಲ್ಲೇ ಇಟ್ಟುಕೊಂಡು ವಿದ್ಯಾಭ್ಯಾಸವನ್ನು ಮಾಡಿಸಿ ತಮ್ಮ ಅಂಗಡಿಯಲ್ಲೇ ಮ್ಯಾನೇಜರು ಕೆಲಸವನ್ನು ಕೊಟ್ಟಿದ್ದರು. ಆದರೆ ಇಂತಹ ಆನಂದವನ್ನು ನೋಡಿ ಸಂತೋಷಪಡುವ ಆಸೆಯು ಶಂಕರರಾಯನ ತಂದೆಗೆ ಇರಲಿಲ್ಲ. ಶಂಕರರಾಯನಿಗೆ ಸುಮಾರು ೮ ವರ್ಷಗಳಾಗಿದ್ದಾಗಲೇ ಆತನ ತಂದೆಯು ಪರಲೋಕಕ್ಕೆ ತೆರಳಿದ್ದನು. ಅಂತೂ ಕೇಶವರಾಯರು ಬಹು ಗುಣಾ

ಧ್ಯರೂ ಸರ್ವಜನಪ್ರಿಯರೂ ಆಗಿದ್ದರು. ದೈವವು ಇಂತಹ ಸಜ್ಜನರಿಗೇ ಏನಾದರೊಂದು ಕೊರತೆಯನ್ನು ಇಟ್ಟೇ ಇರುವುದು. "ಆನೆಯ ಹೊಟ್ಟೆಯಲ್ಲಿ ಸೋನಂಗಿ ಹುಟ್ಟಿ"ದಂತೆ ಇವರ ಉದರದಲ್ಲಿ ಶ್ಯಾಮಣ್ಣನು ಹುಟ್ಟಿದನು. ಒಬ್ಬನೇ ಮಗ. ಹೆಣ್ಣು ಮಕ್ಕಳೂ ಇಲ್ಲ. ಪ್ರೇಮದಿಂದ ಸಾಕಿದರು. ಬಲವಂತದಿಂದ ಶ್ಯಾಮಣ್ಣನು ವಿದ್ಯಾಭ್ಯಾಸ ಮಾಡತೊಡಗಿದನು.

ಅಂತೂ ಇಂತೂ ೧೫ ವರ್ಷಗಳಿಗೆ ಲೋವರ್ ಸೆಕೆಂಡರಿ ಪರೀಕ್ಷೆಗೆ ಕಟ್ಟಿದನು. ಉತ್ತೀರ್ಣನಾಗಲಿಲ್ಲ. ಇನ್ನು ಮುಂದೆ ಓದುವುದೇ ಇಲ್ಲವೆಂದು ಹಠ ಹಿಡಿದನು ತಾಯಿಯ ಮಾತಿನಮೇಲೆ ಇನ್ನೊಂದು ವರ್ಷ ಓದುವೆನೆಂದನು. ಬೇಕಾದಾಗ ತಾಯಿಯ ಬಳಿ ಬಂದು ಅಮ್ಮಾ ಅದು ಬೇಕು, ಇದು ಬೇಕು ಎಂದು ತಂದೆಗೆ ತಿಳಿಯದಂತೆ ದುಡ್ಡನ್ನು ತೆಗೆದುಕೊಂಡು ನಾಟಕ–ಸಿನಿಮಾ ಮೊದಲಾದ ನೋಟಗಳಿಗೆ ಹೋಗುವನು. ಹೀಗೆ ದುಂದುವೆಚ್ಚ ಮಾಡುತ್ತಾ ಬಂದನು. ತಾಯಿಯೂ ಕೂಡಾ ಮಗನ ಬುದ್ಧಿವಂತನಾದರೆ ಸಾಕೆಂದು ತಿಳಿದು, ಮಗನ ಅವಿವೇಕವನ್ನು ತಿಳಿಯದೆ ಕೇಳಿದಾಗ ದುಡ್ಡು ಕೊಡುತ್ತಿದ್ದಳು. ಈ ರೀತಿ ಒಂದು ವರ್ಷ ಕಳೆಯಿತು. ತಾಯಿಯು ಇಹಲೋಕ ವ್ಯಾಪಾರದಿಂದ ಮುಕ್ತಳಾದಳು.

ಶ್ಯಾಮಣ್ಣನು ಈ ವರ್ಷವೂ ತೇರ್ಗಡೆ ಹೊಂದಲಿಲ್ಲ. ತಂದೆಯು ಮಗನಿಗೆ ವಿದ್ಯೆ ಬರುವುದಿಲ್ಲವೆಂದು ತಿಳಿದು ವ್ಯಾಪಾರದಲ್ಲಾದರೂ ಪ್ರವೀಣನಾಗಲೆಂದು ಬಹು ಪ್ರಯತ್ನಪಡುತ್ತಿದ್ದರು. ಬೆಳಗ್ಗಿನಿಂದ ತಮ್ಮ ಹತ್ತಿರದಲ್ಲೇ ಕೂಡಿಸಿಕೊಂಡು ವ್ಯಾಪಾರದ ಮರ್ಮವನ್ನು ತಿಳಿಸುತ್ತಿದ್ದರು. ೧೦ ಘಂಟೆಗೆ ಮಗನನ್ನು ಊಟಮಾಡಿಕೊಂಡು ಬರುವಂತೆ ಮನೆಗೆ ಕಳಿಸಿ ಪುನಃ ಅವನು ಬಂದಮೇಲೆ ತಾವು ಮನೆಗೆ ಹೋಗುತ್ತಿದ್ದರು. ಮಾಪು ೪ ಘಂಟೆಗೆ ಅಂಗಡಿಗೆ ಬಂದು ಮಗನಿಗೆ ಬೋಧೆ ಮಾಡಿ ಆತನನ್ನು ೭ ಘಂಟೆಗೆ ಬರುತ್ತಿದ್ದರು. ಕೇಶವರಾಯರು ಮಗನು ವ್ಯಾಪಾರದಲ್ಲೂ ಬುದ್ಧಿವಂತನಾಗಲಾರನೆಂದು ಮೊದಲೇ ತಿಳಿದು ಅದಕ್ಕಾಗಿ ಬಹು ದುಃಖಪಡುತ್ತಿದ್ದರು. ಅಂತೂ ನಾನು ಬದುಕ ವರೆಗೂ ಬೋಧಿಸುತ್ತಿದ್ದರೆ ಎಂದಾದರೊಂದು ದಿನ ಬುದ್ಧಿವಂತನಾಗಬಹುದೆಂದು ತಿಳಿದು ಅದಕ್ಕಾಗಿ ಬಹು ಬುದ್ಧಿವಾದವನ್ನೂ, ವ್ಯಾಪಾರದ ಲಕ್ಷಣವನ್ನೂ ತಿಳಿಸುತ್ತಿದ್ದರು.

ಮನೆಗೆ ಕೇಶವರಾಯರು ಬಂದು ಊಟ ಮಾಡಿ ಹಾಗೆಯೇ ಕೊಂಚ ಹೊತ್ತು ಆರಾಮ ಕುರ್ಚಿ (Easy chair) ಯ ಮೇಲೆ ಕೂತು ತಮ್ಮ ಅಂಗಡಿಯ ವ್ಯಾಪಾರವು ದಿನಕ್ರಮೇಣ ಕಡಮೆಯಾಗುತ್ತಿರುವ ವಿಷಯದಲ್ಲಿ ಆಲೋಚಿಸತೊಡಗಿದರು. ಕೊಂಚಹೊತ್ತಾದ ಬಳಿಕ––ಆಹಾ! ಇದಕ್ಕೆ ಉಪಾಯವು

ಗೊತ್ತಾಯಿತು. ಈಗಲೇ ಇದಕ್ಕೆ ತಕ್ಕ ಏರ್ಪಾಟು ಮಾಡುವೆನೆಂದು ಆತುರದಿಂದ ತನ್ನ ಉಡುಪನ್ನು ಧರಿಸಿ ಅಂಗಡಿಗೆ ಹೊರಡಲುದ್ಯುಕ್ತನಾದನು.

ಇತ್ತ ಶ್ಯಾಮಣ್ಣನು ತನ್ನ ತಂದೆಯು ಹೊರಗೆ ಹೋಗುವವರೆಗೂ ಆಫೀಸ್ ರೂಂನಲ್ಲಿ ಕೂತಿದ್ದನು. ತರುವಾಯ ಮೊದಲೇ ನಿಯಮಿತಕಾಲಕ್ಕೆ ಬರುವಂತೆ ತಿಳಿಸಿದ್ದ ತನ್ನ ಸ್ನೇಹಿತರನ್ನು ಎದುರುನೋಡುತ್ತಿದ್ದನು. ಮೂರ್ಖರ ಜೊತೆಗೆ ಸೇರುವವರು ಕಡುಮೂರ್ಖರಲ್ಲದೆ ಸಜ್ಜನರು ಸೇರುವರೆ? ಶ್ಯಾಮಣ್ಣನ ಪ್ರಿಯಸ್ನೇಹಿತರ ಪರಿಚಯವನ್ನು ನಮ್ಮ ಪಾಠಕಮಹಾಶಯರಿಗೆ ಮಾಡಿಸೋಣ. ಮೊದಲನೆಯವನ ಹೆಸರು ಪುಟ್ಟು. ಎರಡನೆಯವನ ಹೆಸರು ಕಿಟ್ಟು. ಇವರೆದೆಯನ್ನು ಬಿಚ್ಚಿ ವಿದ್ಯುಚ್ಛಕ್ತಿಯ (Electric light) ಬೆಳಕಿನಿಂದ ಹುಡುಕಿದರೂ ಒಂದಕ್ಷರವೂ ನಮಗೇನೂ ಕಾಣಬರದು. ಇವರ ಬಟ್ಟೆಬರೆಯಾದರೋ (ಗಾಣಿಗನ ಬಟ್ಟೆಯಾದರೂ ವಾಸಿ) ಬೆಂಕಿಯಲ್ಲಿ ಬೇಯದು, ನೀರಿನಲ್ಲಿ ತೋಯದು. ಅನ್ನಕ್ಕೆ ದಂಡ-ಭೂಮಿಗೆ ಭಾರ. ನೋಡಲಾಗಿ ಬದಕಸದ ಗೆಳೆಯರು ಇಂಥವರ ಸಹವಾಸವು ಶ್ಯಾಮಣ್ಣನಿಗೆ ಗಂಟುಬಿತ್ತು. ದಿನಕ್ರಮೇಣ ಪ್ರಾಣಸ್ನೇಹಿತರಾದರು. ಒಬ್ಬರನ್ನೊಬ್ಬರು ಅರಘಳಿಗೆಯೂ ಬಿಟ್ಟಿರಲಾರರು. ಆದರೆ ಶ್ಯಾಮಣ್ಣನ, ತನ್ನ ಸಹವಾಸಕ್ಕೆ ಬಿದ್ದಮೇಲೆ, ಕಿಟ್ಟು ಪುಟ್ಟು ಇವರಿಗೆ ಒಳ್ಳೆ ಬಟ್ಟೆ ಬರೆ, ತಿಂಡಿತೀರ್ಥಗಳ ಖರ್ಚನ್ನೆಲ್ಲಾ ತಾನೇ ವಹಿಸಿದನು ಮಾಡಿದರೆ ಇಂತಹವನ ಸ್ನೇಹ ಮಾಡಬೇಕೆಂದು ಅವಿವೇಕಶಿಖಾಮಣಿಗಳಾದ ಅವರಿರ್ವರೂ "ನಮ್ಮ ಪೂರ್ವಜನ್ಮದ ಸುಕೃತಫಲವಲ್ಲವೇ ಇದು" ಎಂದು ಅಂದುಕೊಳ್ಳುತ್ತಿದ್ದರು ಅಂತೂ ಶ್ಯಾಮಣ್ಣನ ಎಂಜಲನ್ನು ತಿಂದು ಗೂಳಿಯಂತಾದರು. ಯಾರಪ್ಪನ ಮನೆ ಗಂಟು? ಸ್ವತಃ ಸಂಪಾದನೆ ಮಾಡಿದಾಗ ಅಲ್ಲವೇ ಹಣದ ಬೆಲೆಯು ತಿಳಿಯುವುದು? ಅಂತೂ ಇಬ್ಬರೂ ೩ ಘಂಟೆಗೆ ಶ್ಯಾಮಣ್ಣನನ್ನು ನೋಡುವುದಕ್ಕಾಗಿ ಬಂದರು. ಶ್ಯಾಮಣ್ಣನು ಅವರಿಬ್ಬರನ್ನೂ ಮರ್ಯಾದೆಯಿಂದ ಒಳಗೆ ಕರೆದು ತನ್ನ ತಂದೆಯ ಕೊಠಡಿಯಲ್ಲೇ (Office Room) ಕುರ್ಚಿಯಮೇಲೆ ಕೂಡಿಸಿದನು.

ಪುಟ್ಟು—ಎಲ್ಲಯ್ಯಾ ಒಂದು ಸಿಗರೇಟ್ ಕೊಡು

ಕಿಟ್ಟು—ಶ್ಯಾಮಣ್ಣಾ! ಇಲ್ಲಿ ಸೇದಬಹುದೋ?

ಶ್ಯಾಮಣ್ಣ—ಬೇಡಪ್ಪಾ! ನಮ್ಮಪ್ಪ ಬರಬಹುದು ಆದ್ದರಿಂದ ನಡೀರಿ, ಈ ಬಿಸಿಲು ಮಹಡಿಗೆ ಹೋಗಿ ಸಿಗರೇಟ್ (ಹೊಗೆಬತ್ತಿ) ಸೇದಿಬರೋಣ. ಆಮೇಲೆ ಮುಂದಿನ ಮಾತು. ಎಂದು ಎಲ್ಲರೂ ಹೊರಟು ಕಾರ್ಯವನ್ನು ಪೂರೈಸಿಕೊಂಡು ಒಳಗೆ ಬಂದು ತಮ್ಮತಮ್ಮ ಕುರ್ಚಿಯಮೇಲೆ ಕೂತರು. ಆ

ಮಾತು ಈ ಮಾತು ಎಂದು ಕೆಲಸಕ್ಕೆ ಬಾರದ ಹರಟೆ ಹೊಡೆಯುತ್ತಾ ಕೂತಿರು ವಾಗ ಯಾರೋ ಬಾಗಿಲನ್ನು ತಟ್ಟಿದಂತಾಯ್ತು.

ಆಗ ಶ್ಯಾಮಣ್ಣನು ಓಹೋ, ನಮ್ಮ ತಂದೆಯು ಬಂದಂತೆ ಕಾಣುತ್ತೆ. ಇರಲಿ ನೀವು ಮೆಲ್ಲಗೆ ಈ ಬಾಗಿಲಿನಿಂದ ಕೆಳಗೆ ಹೋಗಿ ಕಾದಿರಿ ಎಂದು ಹೇಳಿ ಅವರನ್ನು ಕಳಿಸಿದನು. ತರುವಾಯ ಬಾಗಿಲನ್ನು ತೆಗೆಯಲು ತಂದೆಯು ಒಳ ಹೊಕ್ಕನು. ಮಗನನ್ನು ಹತ್ತಿರ ಕರೆದು ಶ್ಯಾಮೂ ನಮ್ಮ ವ್ಯಾಪಾರವು ದಿನ ಕ್ರಮೇಣ ಇಳಿದು ಹೋಗುತ್ತಿದೆ. ಅದಕ್ಕೆ ಒಳ್ಳೆ ಗುಣಾಢ್ಯರೂ, ರೂಪವತಿ ಯರೂ ಆದ ಸ್ತ್ರೀಯರನ್ನು ನಮ್ಮ (ಕಂಪೆನಿಯ) ಅಂಗಡಿಯ ಪ್ರತಿ ಒಂದು ಶಾಖೆಗೂ ಮಾರಾಟಕ್ಕೆ ಚುನಾಯಿಸಿದರೆ ಆಗ ವ್ಯಾಪಾರಾಭಿವೃದ್ಧಿಯಾಗು ವುದು. ನಾನು ಒಂದು ಜಾಹೀರಾತನ್ನು ಕೊಡುತ್ತೇನೆ ಅದನ್ನು ಇಂದಿನ ಸಾಯಂಕಾಲವೇ ವೃತ್ತಪತ್ರಿಕೆಯಲ್ಲಿ ಪ್ರಕಟಿಸಬೇಕು, ಎಂದು ಈ ರೀತಿ ಬರೆ ಯತೊಡಗಿದನು. "ನಮ್ಮ ಕಂಪೆನಿಯ ಸರಕುಗಳನ್ನು ಅಂಗಡಿಯಲ್ಲಿ ಮಾರಾ ಟ ಮಾಡಲು ಹೆಂಗಸರು ಬೇಕಾಗಿರುತ್ತೆ. ಉಮೇದುವಾರರಾಗಲಿಚ್ಛಿಸುವವರು ತಮ್ಮ ತಮ್ಮ ಯೋಗ್ಯತಾಪತ್ರದೊಡನೆ ಸಮಕ್ಷಮ ಕಂಪೆನಿಯ ಪ್ರೊಪ್ರೈಟ ರನ್ನು ನಾಳೆ ೧೧ ಘಂಟೆಗೆ ನೋಡತಕ್ಕದ್ದು."

—ಕೇಶವರಾವ್.

ಈ ರೀತಿ 'ಸಂಜೆ ಪತ್ರಿಕೆ'ಯಲ್ಲಿ ಪ್ರಕಟಿಸುವಂತೆ ಮಗನ ಕೈಲಿ ಕಳಿಸಿ ದನು. ಮಗನು ತನ್ನ ಖರ್ಚಿಗಾಗಿ ಸ್ವಲ್ಪ ಹಣವನ್ನು ತಂದೆಯನ್ನು ಕೇಳಿ ತೆಗೆದುಕೊಂಡು ಹೊರಹೊರಟನು. ಪ್ರೆಸ್ (ಮುದ್ರಣಾಲಯಕ್ಕೆ) ಗೆ ಹೋಗಿ ತಮ್ಮ ತಂದೆಯು ಕೊಟ್ಟಿದ್ದ ಜಾಹೀರಾತನ್ನು ಮುದ್ರಿಸುವಂತೆ ತಿಳಿಸಿ, ತನ್ನ ಪ್ರಿಯ ಸ್ನೇಹಿತರೊಡನೆ ನಾಟಕಕ್ಕೋ ಚಲನ ಚಿತ್ರ ಮಂದಿರ (ಸಿನಿಮಾ) ಕ್ಕೋ ಹೊರಟನು

ಆಗಲೇ ಕೇಶವರಾಯರ ಪ್ರಕಟನೆಯು ಅನೇಕ ಜನರ ಹಸ್ತಗತವಾಯ್ತು. ಅನೇಕ ಸ್ತ್ರೀಯರು ತಮ್ಮ ತಮ್ಮ ಯೋಗ್ಯತಾಪತ್ರಗಳನ್ನು ನಾಳೆಗೆ ಸಲುವಾಗಿ ಆಗಲೇ ಸಜ್ಜುಗೊಳಿಸಿದರು ಮಾರನೇ ದಿನ ೧೧ ಘಂಟೆಗೆ ಕೇಶವರಾಯರನ್ನು ಕಾಣಲು ೧೫-೨೦ ಜನ ಸ್ತ್ರೀಯರು ಬಂದರು. ಇವರ ಪೈಕಿ ೬ ಜನರನ್ನು ಚುನಾ ಯಿಸಿದರು. ಇವರೆಲ್ಲರೂ ಸುವಾಸಿನಿಯರೂ, ಪತಿವ್ರತಾಧರ್ಮದಿಂದೊಡಗೂ ಡಿದವರೂ, ಗುಣಾಢ್ಯರೂ ಆಗಿದ್ದರು. ಇಂತಹವರು ನೌಕರಿಗೆ ಬರಲು ಕಾರಣ ವೇನೆಂದು ವಾಚಕರು ಶಂಕಿಸಬಹುದು. ಕೇವಲ ಜೀವನೋಪಾಯಕ್ಕಲ್ಲದೆ ಅನ್ಯಥಾ ಅಲ್ಲ. ತಿಳಿದೇಥಾವರು ಇದನ್ನೆಂದಿಗೂ ಹೇಯವೆಂದೆಣಿಸುವುದಿಲ್ಲ.

ಬಡವರ ಕಷ್ಟವು ಭಾಗ್ಯವಂತರಿಗೆಂದಿಗೂ ತಿಳಿಯುವುದಿಲ್ಲ. ಹೇಯವೆಂದು ಭಾವಿಸಿ ಇವರನ್ನು ದೂಷಿಸಬಾರದು. ಬಡವರ ಕಷ್ಟವು ದೇವರಿಗೇ ಗೊತ್ತು. ಹ್ಯಾಗೆಂದರೆ ಓರ್ವ ಹೆಂಗಸಿಗೆ ಒಬ್ಬ ಕುರುಡನಾದ ಗಂಡನಿದ್ದು, ಇವಳಿಗೆ ಮತ್ತಾರೂ ರಕ್ಷಕರಿಲ್ಲದೆ, ಒಂದೆರಡು ಮಕ್ಕಳಿದ್ದರೆ ಅವಳ ಗತಿ ಏನು ? ಜೀವನೋಪಾಯವು ಹೇಗಾದೀತು ? ಇದನ್ನು ವಾಚಕರೇ ಊಹಿಸಲಿ. ಒಳ್ಳೆಯ ಸದಾಚಾರ ಸದ್ವರ್ತನರಾದ ಸ್ತ್ರೀಯರನ್ನೇ ಕೇಶವರಾಯರು ಚುನಾಯಿಸಿದ್ದರು. ಯಾವ ವಿಧವಾದ ಕುಂದೂ ಉಂಟಾಗದಂತೆ ಇವರನ್ನು ಬಹು ಎಚ್ಚರಿಕೆಯಿಂದ ಕಾಣುವಂತೆ ಇತರ ಅಧಿಕಾರಿಗಳಿಗೂ ತಿಳಿಸಿದರು. ಅಲ್ಲದೆ ತಾವೂ ಮೇಲಿಂದ ಮೇಲೆ ವಿಚಾರಿಸುತ್ತಿದ್ದರು. ಆರು ಜನ ಸ್ತ್ರೀಯರಿಗೂ, ಒಬ್ಬೊಬ್ಬರಿಗೆ ಒಂದೊಂದು ಶಾಖೆಯ ಮಾರಾಟದ ಯಾಜಮಾನ್ಯವನ್ನು ವಹಿಸಿದ್ದರು. ಈ ಆರು ಜನರ ಮುಖ್ಯ ವಿಚಾರಣೆಯನ್ನೂ ಮಾಡಲೋಸುಗ ತಮ್ಮ ಕಂಪೆನಿಯಲ್ಲಿ ಸೆಕ್ರೆಟರಿಯಾಗಿದ್ದ 'ಸುಗುಣೆ'ಯನ್ನೇ ನೇಮಿಸಿದರು.

ಸುಗುಣೆಯೂ ಮತ್ತು ಇವಳ ತಂಗಿ "ಸರಳೆ"ಯೂ ಅನಾಥ ಬಾಲಕಿಯರು. ಇವರೀರ್ವರನ್ನೂ ಕೇಶವರಾಯರು ತಮ್ಮ ಮನೆಯಲ್ಲೇ ಇಟ್ಟುಕೊಂಡು, ಪುತ್ರಿಯರಂತೆ ಸಾಕಿ ವಿದ್ಯಾಭ್ಯಾಸಮಾಡಿಸಿ ಅಭಿವೃದ್ಧಿಗೆ ತಂದಿದ್ದರು.

ಸುಗುಣೆಯು ಮ್ಯಾನೇಜರ್ ಶಂಕರರಾಯರ ಧರ್ಮಪತ್ನಿಯೂ ಅನಾಥ ಬಾಲಕಿಯೂ ಆಗಿದ್ದಳು. ಶಂಕರರಾಯನನ್ನು ಮುಂದಕ್ಕೆ ತಂದು ವಿದ್ಯಾಭ್ಯಾಸ ಮಾಡಿಸಿದ್ದರಾದ್ದರಿಂದ ತಾವೇ ಶಂಕರರಾಯರಿಗೆ 'ಸುಗುಣೆಯ'ನ್ನಿತ್ತು ಲಗ್ನ ಮಾಡಿದ್ದರು. ಈಕೆಯು ವ್ಯಾಪಾರ ವಿಷಯದಲ್ಲಿ ಒಳ್ಳೆಯ ಸಲಹೆಯನ್ನು ಕೊಡುತ್ತಿದ್ದಳು. ಆಂಗ್ಲೇಯಭಾಷಾ ಪ್ರವೀಣಳಾಗಿದ್ದಳು. ಇವಳ ಬುದ್ಧಿ ಕೌಶಲ್ಯಕ್ಕಾಗಿ ಕೇಶವರಾಯರು ತಮ್ಮ ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಿಸಿದ್ದರು.

ದಿನಕ್ರಮೇಣ ಕೆಟ್ಟುಹೋಗಿದ್ದ ವ್ಯಾಪಾರವು, ಸುಗುಣೆಯ ಬುದ್ಧಿಶಕ್ತಿಯಿಂದಲೂ ಮಿಕ್ಕ ಸ್ತ್ರೀಯರ ಮಾರಾಟದ ಚತುರತೆಯಿಂದಲೂ ನೆಟ್ಟಗಾಗಿ ವಿಶೇಷ ಲಾಭವುಂಟಾಗುತ್ತಾ ಬಂತು. ಹೀಗೆ ೨-೩ ವರ್ಷಗಳು ಕಳೆದುಹೋದವು. ಕೇಶವರಾಯರು ವಿಷಮಶೀತಜ್ವರದಿಂದ ದಿನಕ್ರಮೇಣ ಬಡವಾಗುತ್ತಾ ಬಂದರು. ಕೊನೆಗೆ ಒಂದು ದಿನ ತಮ್ಮ ಮ್ಯಾನೇಜರಾದ ಶಂಕರರಾಯರನ್ನೂ ತಮ್ಮ ಪುತ್ರಿಯಂತೆ ಕಾಣುತ್ತಿದ್ದ ಸುಗುಣೆಯನ್ನೂ ವರ್ತಮಾನ ಪ್ರಕಾಶಿಕೆಯ (ಟೆಲಿಫೋನ್) ಮೂಲಕ ತಮ್ಮ ಮನೆಗೆ ಬರುವಂತೆ ತಿಳಿಸಿದರು. ಕೂಡ್ಲೇ ಈರ್ವರೂ ಅಂಗಡಿಯಿಂದ ಬಂದು ಕೇಶವರಾಯರ ಹತ್ತಿರ ಕೂತು ಉಪ

ಚರಿಸತೊಡಗಿದರು. ತನ್ನ ಮರಣ ಕಾಲವು ಸಮೀಪವಾಯ್ತೆಂದು ತಿಳಿದು ವಕೀಲರಾದ ವಾಸುದೇವರಾಯರನ್ನು ಕರೆತರುವಂತೆ ಸೇವಕನೊಬ್ಬನಿಗೆ ಕೇಶವರಾಯರು ತಿಳಿಸಿದರು. ಕೂಡ್ಲೇ ವಾಸುದೇವರಾಯರು ತಮ್ಮ ಜೊತೆಯಲ್ಲಿ ಒಬ್ಬ ಗುಮಾಸ್ತೆಯನ್ನು ಕರೆದುಕೊಂಡು ಬಂದರು. ಅನಂತರ ಕೇಶವರಾಯರು ಮುಂದೆ ಹೇಳುವ ರೀತಿ ಉಯಿಲ್ (ವಿಲ್) ನ್ನು ಬರೆಸತೊಡಗಿದನು. 'ನನ್ನ ಆಸ್ತಿಯು ನಗದು ೮೦ಲಕ್ಷ ರೂಪಾಯಿಗಳು ಬ್ಯಾಂಕಿನಲ್ಲಿಟ್ಟಿದ್ದೇನೆ. ಅದರಲ್ಲಿ ೨೦ ಲಕ್ಷ ರೂಪಾಯಿಗಳನ್ನ ನನ್ನ ಮರಣಾನಂತರ ನನ್ನ ಮಗನಿಗೆ ಕೊಡತಕ್ಕದ್ದು. ಈ ಹಣವನ್ನು ಹೊಂದಿ ನಮ್ಮ ಶ್ಯಾಮುವು (ಮಗನು) ಇಂದಿನಿಂದ ಒಂದು ವರ್ಷದಲ್ಲಿ ಅಂಗಡಿಯ ವ್ಯಾಪಾರವನ್ನು ಸ್ವತಃ ಅಭಿವೃದ್ಧಿಗೊಳಿಸಿ ಒಳ್ಳೆಯ ಮಾರ್ಗದಲ್ಲಿದ್ದರೆ ಬಾಕಿ ಹಣಕ್ಕೆ ಅವನೇ ಹಕ್ಕುದಾರನು. ಅಂಗಡಿಯೂ ಅವನ ಸ್ವಾಧೀನವಾಗುವುದು. ಹಾಗಲ್ಲದೆ ನನ್ನ ಮಗನೇನಾದರೂ ಪೋಲಿಯಾಗಿ ಅವಿವೇಕಮಾರ್ಗದಲ್ಲಿ ಹೋದರೆ ಅಂಗಡಿಯ ಸರ್ವಸ್ವಾತಂತ್ರ್ಯವೂ ನನ್ನ ಅಂಗಡಿಯ ಮ್ಯಾನೇಜರಾದ ಶಂಕರ ರಾಯರಿಗೇ ಆಗುವುದು. ಬ್ಯಾಂಕಿನಲ್ಲಿ ಬಾಕಿ ಉಳಿದ ನಗದು ೬೦ ಲಕ್ಷ ರೂಪಾಯಿಗಳ ಪೈಕಿ ೩೦ ಲಕ್ಷ ರೂಪಾಯಿಗಳನ್ನು ಶಂಕರರಾಯರು ಅಂಗಡಿಯ ವ್ಯಾಪಾರಕ್ಕಾಗಿ ಉಪಯೋಗಿಸಿಕೊಳ್ಳುವುದು. ಮಿಕ್ಕ ೩೦ ಲಕ್ಷ ರೂಪಾಯಿಗಳನ್ನು ದಾನಧರ್ಮಾದಿ ಪರೋಪಕಾರಕ್ಕಾಗಿ ಸರ್ಕಾರದವರು ವೆಚ್ಚ ಮಾಡತಕ್ಕದ್ದು' ಎಂದು ಬರೆಸಿ ಕೆಳಗೆ 'ಕೇಶವರಾಯ' ಎಂದು ಸಹಿಯನ್ನು ಹಾಕಿದರು.

ಇಷ್ಟು ಹೇಳಿ ಬರೆಸುವ ಹೊತ್ತಿಗೆ ಕೇಶವರಾಯರ ಗಂಟಲು ಜ್ವರದ ತಾಪಕ್ಕೆ ಒಣಗುತ್ತಾ ಬಂತು. ಸುಗುಣೆಯು ಕೂಡ್ಲೇ ಸ್ವಲ್ಪ ಹಾಲನ್ನು ಕುಡಿಸಿದಳು. ಕೇಶವರಾಯರು ಸ್ವಲ್ಪ ಚೇತರಿಸಿಕೊಂಡು—'ಮಗೂ, ಸುಗುಣಾ, ನನ್ನ ಪುತ್ರನಾದ ಶ್ಯಾಮಣ್ಣನು ನನ್ನ ಮಗನಲ್ಲ. ನಿನ್ನ ಮಗನೆಂದು ತಿಳಿ. ಅವನ ಮುಂದಿನ ಹಾನಿವೃದ್ಧಿಗಳಿಗೆ ನೀನೇ ಬಾಧ್ಯಳು. ಅವನನ್ನು ಸುರಕ್ಷಿತವಾಗಿ ಕಾಪಾಡಿ ಅಭಿವೃದ್ಧಿಗೆ ತರುವೆನೆಂದು ವಾಗ್ದಾನವನ್ನು ಕೊಡು. ನಾನು ಸುಖವಾಗಿ, ನಿಶ್ಚಿಂತೆಯಿಂದ ಈ ತನುವನ್ನು ನೀಗುವೆನು. ಇನ್ನು ಹೆಚ್ಚು ಮಾತಾಡಲಾರೆ. ಆಗಲೇ ಯಮಕಿಂಕರರು ನನ್ನನ್ನು ಪಾಶಗಳಿಂದ ಬಿಗಿದು ನನ್ನ ಆತ್ಮನನ್ನು ಈಚೆಗೆ ಎಳೆಯುತ್ತಿರುವರು.' 'ಶಂಕರರಾವ್, ನೀನೂ ನಿನ್ನ ಪತ್ನಿಯಂತೆ ನನ್ನ ಮಗನನ್ನು ಮುಂದಕ್ಕೆ ತರುವೆನೆಂದು ವಾಗ್ದಾನ ಕೊಡು' ಎನ್ನಲು, ದಂಪತಿಗಳಿಬ್ಬರೂ ಮರಣಾಭಿಮುಖರಾಗಿದ್ದ ಕೇಶವರಾಯರ ಕೈ ಹಿಡಿದು ವಾಗ್ದಾನ ಮಾಡಿದರು. ತರುವಾಯ ಶ್ಯಾಮೂ! ಶ್ಯಾಮಣ್ಣಾ! ಎಂದು ಕೇಶವರಾಯರು ಕೂಗಿದರು.

ಶ್ಯಾಮಣ್ಣನು ಎಲ್ಲಿರುವನು ? ಯಾವ, ನಾಟಕವೋ ಯಾಸ್ಕೋಪೋ ಎಲ್ಲಿಯೋ ಹೋಗಿದ್ದಾನೆ. ಮಗನ ಆನಂದವೇ ಆನಂದ. ಇಲ್ಲಿ ತಂದೆಯು ಮಗನ ಅಭಿವೃದ್ಧಿಗಾಗಿ ಎಷ್ಟೋ ಪ್ರಯತ್ನಪಟ್ಟು, ನಿರಾಶೆ ಹೊಂದಿದ್ದನು. ಕೊನೆಗೆ ನಿರಾಶೆಯಿಂದ ಮರಣಾಭಿಮುಖನಾದನು. ಸುಗುಣೆಯು ಶ್ಯಾಮಣ್ಣ ನನ್ನು ಹುಡುಕುವುದಕ್ಕಾಗಿ ಅನೇಕ ಸೇವಕರನ್ನು ಕಳಿಸಿದಳು. ಪ್ರಯೋಜನ ವಾಗಲಿಲ್ಲ. ಸೇವಕರು ಹಿಂತಿರುಗಿ ಬಂದು ಸಿಕ್ಕಲಿಲ್ಲವೆಂದು ತಿಳಿಸಿದರು.

ಪುನಃ ಕೇಶವರಾಯರು ಶ್ಯಾಮೂ ! ಮಗೂ, ಶ್ಯಾಮಣ್ಣಾ !! ನಿನ್ನೊಬ್ಬ ನನ್ನೇ ಈ ಪ್ರಪಂಚದಲ್ಲಿ ಬಿಟ್ಟುಹೋಗುತ್ತೇನೆ. ಎನ್ನುತ್ತಾ ಇನ್ನೂ ಶ್ಯಾಮ ಣ್ಣನು ಬರಲಿಲ್ಲವೇ ಎಂದು ಸುಗುಣೆಯನ್ನು ದೃಷ್ಟಿಸಿ ನೋಡುತ್ತಾ ಮತ್ತೊಮ್ಮೆ ಶ್ಯಾ-ಮ-ಣ್ಣಾ !!! ಎಂದು ಗದ್ಗದ ಸ್ವರದಿಂದುಚ್ಚರಿಸುತ್ತಾ ಕಣ್ಣುಮುಚ್ಚಿದರು.

ಕೇಶವರಾಯರ ಪ್ರಾಣವಾಯುವು ಹೊರಟೇಹೋಯಿತು ! ಎಲ್ಲರ ಕಣ್ಣಿ ನಿಂದಲೂ ನೀರು ಧಾರೆ ಧಾರೆಯಾಗಿ ಹರಿಯತೊಡಗಿತು !! ಇಂತಹ ಸಾಧು ಶೀಲರೂ, ಧರ್ಮಿಷ್ಟರೂ ಆದ ಕೇಶವರಾಯರನ್ನು ಕಳೆದುಕೊಂಡುದಕ್ಕಾಗಿ ಎಲ್ಲರೂ ದುಃಖಪಟ್ಟರು. ಸುಗುಣೆಯಂತೂ ಕಡು ದುಃಖಪಟ್ಟಳು. ನಾವೂ ದುಃಖಪಡುತ್ತೇವೆ. ನೀವೋ ?

---

## ದ್ವಿತೀಯ ಪರಿಚ್ಛೇದ

### ಅವಿವೇಕಿ—ಮತ್ತು ಅವನ ಕೈಲಿನ ಹಣ




ತ್ರಿ ಸುಮಾರು ೯॥ ಘಂಟೆಗೆ ಶ್ಯಾಮಣ್ಣನು ಬಯಾಸ್ಕೋಪಿ ನಿಂದ ಹೊರಟು ತನ್ನ ಸ್ನೇಹಿತರನ್ನು ಅವರವರ ಮನೆಗಳಿಗೆ ಸಾಗಕಳುಹಿಸಿ, ತನ್ನ ಮನೆಗೆ ಬಂದನು. ಮನೆಯಲ್ಲಾದ ರೋ ಎಲ್ಲರೂ ಶೋಕಜಲಧಿಯಲ್ಲಿ ಮುಳುಗಿದ್ದಾರೆ. ಮನೆಯ ಕಳೆಯೇ ಅಳಿಸಿಹೋಗಿದೆ. ಶೂನ್ಯಗೃಹ. ಶಂಕರರಾಯರು ಕೇಶವರಾಯರ ಬಂಧುಗಳಿಗೆ ತಂತೀವರ್ತಮಾನದ ಮೂಲಕ ಅವರ ಮರಣ ವಾರ್ತೆಯನ್ನು ತಿಳಿಸಿದರು. ಹತ್ತಿರಿದ್ದವರು ಬಂದರು. ಶ್ಯಾಮಣ್ಣನು ಇದೆಲ್ಲ ವನ್ನೂ ಕಂಡು ಘಾಬರಿಗೊಂಡನು. ಮುಂದೆ ದಿಕ್ಕೇ ತೋಚದಂತಾಯ್ತು. ಪಾಪ. ಆಕಾಶವೇ ತನ್ನ ಮೇಲೆ ಕಳಚಿಬಿತ್ತೋ ಎನ್ನುವಂತೆ ತಂದೆಯ ಶವದ ಮೇಲೆ ಬಿದ್ದು ಹೊರಳಾಡಿದನು. ಕಣ್ಣುಗಳಿಂದ ಅಶ್ರುಬಿಂದುಗಳು ಧಾರೆಧಾರೆ

ಯಾಗಿ ಬಿದ್ದು ನದಿಯೋಪಾದಿಯಲ್ಲಿ ಹರಿಯತೊಡಗಿತು. ಸುಗುಣೆಯು ಉಕ್ಕಿ ಬರುತ್ತಿದ್ದ ತನ್ನ ದುಃಖವನ್ನು ನುಂಗಿ ಶ್ಯಾಮಣ್ಣನನ್ನು ಸಂತೈಸತೊಡಗಿದಳು. ಆ ರಾತ್ರಿಯನ್ನು ಸರ್ವರೂ ದುಃಖದಿಂದ ನೂಕಿದರು.

ಮಾರನೇದಿನ ಇನ್ನೂ ಅನೇಕ ಜನ ಕೇಶವರಾಯರ ಬಂಧುಗಳು ಈ ಮಹದ್ದುಃಖದಲ್ಲಿ ಭಾಗಿಗಳಾಗಲು ಬಂದರು. ತರುವಾಯ ವಿಧಿಪೂರ್ವಕ ಕೇಶವರಾಯರ ಶವಕ್ಕೆ ಆಗಬೇಕಾದ ಉತ್ತರಕ್ರಿಯಾದಿಗಳನ್ನು ಶ್ಯಾಮಣ್ಣನಿಂದ ಮಾಡಿಸಿದರು. ದಾನಧರ್ಮಾದಿ ಪರೋಪಕಾರಗಳನ್ನು ಬಯಕೆಯಾಗಲೇ ಬೇಕಾದಷ್ಟು ಮಾಡಿ ಕೀರ್ತಿವಂತರಾಗಿದ್ದ ಕೇಶವರಾಯರಿಗೆ ಮರಣಾನಂತರವೂ ಕೂಡ ಯಶಶ್ಶರೀರಿಗಳೆಂದೆನಿಸಿಕೊಳ್ಳಲೆಂದು ಸುಗುಣೆಯು ಬೇಕು ಬೇಕಾದ ದಾನಗಳನ್ನು ಮಾಡಿಸಿದಳು. ಸರ್ವಭೂತಗಳಿಗೂ ತೃಪ್ತಿಯುಂಟಾಯ್ತು. ಅಂದ ಮೇಲೆ ಮತ್ತೇನು ?

ಹೀಗೆ ಕೆಲವು ದಿನಗಳು ಕಳೆಯಿತು. ಈಗ ಮನೆಯ ಆಡಳಿತವು ನಮ್ಮ ಕಥಾನಾಯಕನಾದ ಶ್ಯಾಮಣ್ಣನದೇ ಆಯ್ತು. ತನ್ನ ದುಃಖವೆಲ್ಲಿಯೋ ಹೋಯ್ತು. ಮಿತ್ರರಾದ ಕಿಟ್ಟುಪುಟ್ಟರನ್ನು ಬೇಕಾದಹಾಗೆ ಉಪಚರಿಸತೊಡಗಿದನು ಮಿತ್ರರಿಗೆ ಸದಾ ಇವನ ಮನೆಯೇ ಆವಾಸಸ್ಥಾನವಾಯ್ತು. ಯಾರಿಗದರೂ ಯಾವ ವಿಧವಾದ ಯೋಚನೆಯಾದರೂ ಇದ್ದರೆ ತಾನೆ ? ಯಾರಿಗೂ ಇಲ್ಲ. ಶ್ಯಾಮಣ್ಣನು ಇದುವರೆಗೂ ತನ್ನ ಖರ್ಚಿಗೆ ಬೇಕಾದಷ್ಟು ಹಣವನ್ನು ತಾಯಿಯಿರುವವರೆಗೂ ಆಕೆಯಿಂದ ತೆಗೆದುಕೊಳ್ಳುತ್ತಿದ್ದನು. ಆಕೆಯು ಗತಿಸಿದ ಮೇಲೆ ತಂದೆಯಿಂದ ತೆಗೆದುಕೊಳ್ಳುತ್ತಿದ್ದನು. ಶ್ಯಾಮಣ್ಣನನ್ನು ನಂಬಿದ ಅವನ ಮಿತ್ರರಿಗೆ ಯೋಚನೆಯಲ್ಲಿ ಬಂತು ? ಸ್ವಲ್ಪ ಶ್ಯಾಮಣ್ಣನು ಆಲೋಚಿಸಬೇಕಾಯ್ತು. ತಂದೆಯೂ ಇಲ್ಲ-ತಾಯಿಯೂ ಇಲ್ಲ. ಖರ್ಚಿಗೇನು ಮಾಡಬೇಕು ? ಅಂಗಡಿಯ ಆಡಳಿತವು ಶಂಕರರಾಯರ ಕೈಲಿದೆ. ಅವರನ್ನು ದುಡ್ಡು ಕೇಳಲು ಸಂಕೋಚ. ಹೀಗಿರುವಾಗ ದುಡ್ಡಿಗಾಗಿ ಏನು ಮಾಡಬೇಕೆಂದು ಚಿಂತಿಸುತ್ತಾ ತನ್ನ ಮಿತ್ರರೊಂದಿಗೆ ಆಲೋಚಿಸುತ್ತಿದ್ದನು.

ಇಂತಹ ಸಂದರ್ಭದಲ್ಲಿ ವಕೀಲರಾದ ವಾಸುದೇವರಾಯರು ಶ್ಯಾಮಣ್ಣನ ಮನೆಗೆ ಬಂದು ಅಯ್ಯಾ ನಿಮ್ಮ ತಂದೆಯು ತಮ್ಮ ಮರಣಾನಂತರ ನಿನಗೆ ೨೦ ಲಕ್ಷ ರೂಪಾಯಿಗಳನ್ನು ಕೊಡುವಂತೆ ಹೇಳಿತ್ತಾರೆ. ಇಗೋ ಆ ಹಣಕ್ಕೆ ನಿಮ್ಮ ಬ್ಯಾಂಕಿಗೆ ಚಕ್ಕು ಒಂದನ್ನು ಕೊಡುತ್ತೇನೆ. ಹಣವನ್ನು ತೆಗೆದುಕೊಂಡು ನಿಮ್ಮ ಅಂಗಡಿಯ ವ್ಯಾಪಾರಾದಿಗಳನ್ನು ನೋಡಿಕೊ. ಬುದ್ಧಿವಂತನಾಗಿರು ಎಂದು ಹೇಳಿ ಹೊರಡಲುದ್ಯುಕ್ತನಾದನು. ಅಷ್ಟರಲ್ಲಿ ಶ್ಯಾಮಣ್ಣನು ವಕೀಲರನ್ನು ಕುರಿತು, "ಏನಯ್ಯಾ ವಕೀಲನಾಗಿ ನನಗೇ ಮೋಸಮಾಡುವಂತೆ

ಕಾಣುತ್ತೆ. ಬಾಯಲ್ಲಿ ಹೇಳುವುದು ನೋಡಿದರೆ ೨೦ ಲಕ್ಷ ನನಗೆ ಕೊಟ್ಟಿ ದ್ದಾರೆರೋ ಏನೋ ಬಿಳೀ ಕಾಗದದ ಮೇಲೆ ಕರೇ ಗೀಟೆಳೆದ ಕಾಗದ ಕೊಡು ತ್ತೀಯಾ ಸರಿಸರಿ. ಎಷ್ಟು ದಿನಗಳಿಂದ ಹೊಂಚುಹಾಕುತ್ತಿದ್ದೆ ಒಳ್ಳೆ ಮಾ ತಿನಿಂದ ಹಣವನ್ನು ಕೊಟ್ಟು ಇಲ್ಲಿಂದ ಹೊರಡು ಎಂದು ಆ ಅವಿವೇಕಿ ಶ್ಯಾಮಂ ಣನು ಜರಿದನು. ಅಷ್ಟರಲ್ಲಿ ಕಿಟ್ಟನು ಸ್ವಲ್ಪ ಓದುಬರೆಹ ತಿಳಿದವನಾದ್ದರಿಂದ "ಅಯ್ಯಾ ಶಾಮು, ಇದನ್ನು ಬ್ಯಾಂಕಿಗೆ ಕೊಟ್ಟರೆ ಹಣ ಬರುವುದು. ಹೆದರ ಬೇಡ ಎಂದು ಸಮಾಧಾನಮಾಡಿದನು. ಪುನಃ ವಕೀಲನು ಶ್ಯಾಮಂಣನಿಗೆ ಎಲ್ಲವನ್ನೂ ತಿಳಿಸಿ ಇವನಂತಹ ಅವಿವೇಕಶಿಖಾಮಣಿ ಇನ್ನಿಲ್ಲವೆಂದುಕೊಂಡು ಹೊರಹೊರಟನು.

ಶ್ಯಾಮಂಣನು ತನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿತ್ತು ಎಂದುಕೊಂಡು ಅಯ್ಯಾ ಶಾನು ಬುದ್ಧಿಗೇನು ಮಾಡಲಿ ಎಂದು ಚಿಂತಿಸುತ್ತಿರುವ ಕಾಲಕ್ಕೆ ಸರಿ ಯಾಗಿ ೨೦ ಲಕ್ಷ ರೂಪಾಯಿ ಬಂದಂತಾಯಿತಲ್ಲವೇ! ನಮ್ಮ ಅದೃಷ್ಟವೇ ಅ ದೃಷ್ಟವಯ್ಯಾ. ನೋಡಿಕೊಳ್ಳೋಣ. ೨೦ ಲಕ್ಷರೂಪಾಯಿಗಳು ನಾವು ಸಾ ಯುವವರೆಗೆ ತಿಂದರೂ ಸವೆಯುವುದಿಲ್ಲ. ಇರಲಿ. ನಡೀರಿ. ಎಲ್ಲಾ ಇವ ತ್ತು ಇಲ್ಲೇ ಜಾಗ್ರತೆಯಾಗಿ ಊಟಮಾಡಿಕೊಂಡು ಬ್ಯಾಂಕಿಗೆ ಹೋಗೋಣ. ಕಿಟ್ಟು, ಬ್ಯಾಂಕಿನಲ್ಲಿ ಮುಂದೆ ಹಣಬರುವುದಕ್ಕೆ ಏನೇನು ಮಾಡಬೇಕೋ ಅದ ನ್ನೆಲ್ಲಾ ನೀನೆ ನೋಡಿಕೊಳ್ಳಬೇಕು. ಎಂದು ಹೇಳಿ ಊಟಮಾಡುವದಕ್ಕೆ ಎಲ್ಲ ರೂ ಹೊರಟರು.

ಊಟವಾದನಂತರ ಎಲ್ಲರೂ ಉಡುಪನ್ನು ಧರಿಸಿ ಬ್ಯಾಂಕಿಗೆ ಬಂದು ಚೆಕ್ಕನ್ನು ಹಾಜರ್ಮಾಡಿದರು. ೨೦ ಲಕ್ಷ ರೂಪಾಯಿ ಭಾರೀ ಹಣವಾದ್ದರಿಂದ ಬ್ಯಾಂಕಿನವರು ಚೆಕ್ಕಿನ ಮೇಲೆ ತನ್ನ ಸಹಿಯನ್ನು ಮಾಡೆಂದನು. ಶ್ಯಾಮಂಣ ನು ಲೋಅರ್ ಸೆಕೆಂಡ್ ಪರೀಕ್ಷೆಗೆ ಹೋಗಿದ್ದನೆಂಬುದು ಹೆಸರಷ್ಟೆ ಅದೂ ಬಿಟ್ಟಾಗಲೇ ೩-೪ ವರ್ಷಗಳಾಯಿತು. ಕಲಿತಿದ್ದ ಒಂದೆರಡು ಆಂಗ್ಲೇಯ ಶಬ್ದ ಗಳೂ ಮರೆಯಿತು. ಆದರೂ ತನ್ನ ಉಡುಪಿಗೆ ತಕ್ಕ ಚರ್ಯೆಯನ್ನು ತೋರಿಸ ಬೇಕೆಂದು ಇಂಗ್ಲೀಷಿನಲ್ಲಿ ರುಜು (ಸಹಿ) ವನ್ನು ಹಾಕಿದನು. ಆದರೆ ಅದು 'ಶ್ಯಾಮಣ್ಣ' ಎನ್ನುವ ಬದಲು "ಶ್ಯಾಮಮ್ಮ" ಎಂದಾಯ್ತು. ಬ್ಯಾಂಕಿನವನಿಗೆ ಅನುಮಾನ ಬಂತು. ಇವನು ಶ್ಯಾಮಣ್ಣನು ಹೌದೋ ಅಲ್ಲವೋ ಏನು ಮಾಡಲಿ ಎಂದು ಹಾಗೇ ಯೋಚಿಸಿದನು. ಕೊನೆಗೆ ಅಯ್ಯಾ ನಿನ್ನ ಉಡುಪನ್ನು ನೋಡಿದರೆ ಗಂಡಸಿನಂತೆ ಇರುವೆ. ನಿನ್ನ ಸಹಿಯಾದರೊ ಹೆಂಗಸಿನ ರುಜುವಿನಂತಿದೆ ಇದ್ರ ನನಗೆ ಸಂಶಯ. ಮೊದಲೇ ಈ ಚಕ್ಕು ಭಾರಿ ಹಣವುಳ್ಳದ್ದಾಗಿದೆ. ಆದ್ದರಿಂದ ನೀನೇ ಶ್ಯಾಮಣ್ಣ ಎನ್ನುವುದಕ್ಕೆ ಒಬ್ಬ ದೊಡ್ಡ ಗೌರವಸ್ಥರ ಜಾಮೀನುಬೇಕಾಗಿ

ರುತ್ತೆ. ಆದ್ದರಿಂದ ಈ ಚೆಕ್ಕು ಕೊಟ್ಟವರನ್ನೇ ಕರೆದುಕೊಂಡು ಬಂದರೆ ಹಣವು ದೊರೆಯುತ್ತೆ ಎಂದು ಹೇಳಿದನು. ಅವಿವೇಕದಿಂದಾಗುವ ಫಲವು ಇದೇ ಅಲ್ಲವೇ? ಸರಿ, ಮುಂದೆ ವಕೀಲರನ್ನು ಕರೆತರೋಣ ನಡೀರಿ ಎಂದು ಎಲ್ಲರೂ ಮನೆಗೆ ಬಂದರು. ಅಷ್ಟರಲ್ಲಿ ಕಿಟ್ಟನು ಶ್ಯಾಮಣ್ಣಾ ಈಗಾಗಲೇ ಎರಡು ಘಂಟೆ ಆಯಿತು ಇಂದು ಶನಿವಾರ. ವಕೀಲರನ್ನು ಕರದುಕೊಂಡು ಬರುವಷ್ಟರಲ್ಲಿ ಬ್ಯಾಂಕು ಮುಚ್ಚಿಬಿಡುತ್ತದೆ. ನಾಳೆ ಸಾಯಂಕಾಲ ಲಾಯರನ್ನು ನೋಡಿ ಸೋಮವಾರ ನಮ್ಮ ಜೊತೆಯಲ್ಲಿ ಬ್ಯಾಂಕಿಗೆ ಬರುವಂತೆ ಮಾಡೋಣ. ಇದಕ್ಕಾಗಿ ಇಷ್ಟು ಚಿಂತೆಯೇ? ನಡಿ ಮನೆಗೆ ಹೋಗಿ ಸ್ವಲ್ಪ ಫಲಾಹಾರವನ್ನು ಮಾಡೋಣ ಎಂದು ಎಲ್ಲರೂ ಮನೆಗೆ ಬಂದರು.

ತರುವಾಯ ಶಾಮಣ್ಣನು ಪುಟ್ಟು ಇಂದು ಬ್ಯಾಂಕಿನಿಂದ ಹಣ ಬಂದಿದ್ದರೆ ಈ ದಿನ ನಾಟಕ ಬಹಳ ಚೆನ್ನಾಗಿತ್ತು. ಹೋಗೋಣವೆಂದಿದ್ದೆ. ಏನು ಮಾಡಲಿ, ಕೈಲಿ ಒಂದುಕಾಸೂ ಇಲ್ಲವಲ್ಲಾ. ಯಾರನ್ನು ಕೇಳುವುದು ಎಂದು ಗೊಣಗುಟ್ಟುತ್ತಾ ಸುಮ್ಮನಾದನು.

ಕಿಟ್ಟ—ಅಯ್ಯಾ! ಶಾಮು, ಇಂದು ದುಡ್ಡೇ ಇಲ್ಲದಂತಾಯ್ತೇ.

ಪುಟ್ಟ—ಏನಯ್ಯಾ ಕಿಟ್ಟು ಹೀಗೆ ಹೇಳುತ್ತಿ, ಭಾಗ್ಯಲಕ್ಷ್ಮಿಯು ಇರುವ ಮನೆಯಲ್ಲಿ ದರಿದ್ರಲಕ್ಷ್ಮಿಯನ್ನು ಬಯಸುತ್ತೀಯೋ? ಶಾಮಣ್ಣಾ, ನೀನೇನೂ ಹೆದರಬೇಡ. ನಿನ್ನಲ್ಲಿ ಅನೇಕ ಬೆಲೆ ಬಾಳುವ ವಸ್ತುಗಳು ಇದೆ. ಅಲ್ಲದೆ ಮನೆಯಲ್ಲಿ ಹೆಚ್ಚಿಕೆ ಬೆಲೆಬಾಳುವ ಸಾಮಾನುಗಳು ಅನೇಕ ಇವೆ. ಹೀಗಿರುವಲ್ಲಿ ಏನಾದರೊಂದು ಸಾಮಾನನ್ನು ಗಿರವಿ (ಮಾರ್ವಾಡಿ ಅಂಗಡಿಯಲ್ಲಿ) ಇಟ್ಟರೆ ದುಡ್ಡು ಬರಲಾರದೇ, ಇದಕ್ಕೇಕಯ್ಯಾ ನೀನು ಇಷ್ಟು ದೂರ ಆಲೋಚಿಸುತ್ತಾ ಖಿನ್ನನಾಗಿರುವೆ? ನಾಳೆ ಹಣ ಬಂದಾಗ ಪುನಃ ಆ ಸಾಮಾನನ್ನು ಬಿಡಿಸಿಕೊಂಡರಾಯ್ತು. ಈ ವಿಷಯದಲ್ಲಿ ನಿನ್ನ ಆಕ್ಷೇಪಣೆಯೇನಾದರೂ ಉಂಟೋ?

ಶ್ಯಾ—ಭಲೆ! ಸ್ನೇಹಿತನೆಂದರೆ ನೀನೆ ಅಪ್ಪ! ಬಲು ಒಳ್ಳೆಯ ಆಲೋಚನೆಯನ್ನು ಹುಡುಕಿದೆ. ಮುಂದೆ ಬಿಡಿಸಿಕೊಂಡರಾಯ್ತು. ಇದೋ ಈ ಭಂಗಾರದ ಕೈಗಡಿಯಾರ (wrist watch) ವನ್ನು ಗಿರವಿ ಇಟ್ಟು, ಎಷ್ಟು ಬರುತ್ತದೋ ಅಷ್ಟನ್ನು ತೆಗೆದುಕೊಂಡು ಬಾ. ಜಾಗ್ರತೆ ನಾವೆಲ್ಲರೂ ರಾತ್ರಿ ಊಟದ ಶಾಸ್ತ್ರವನ್ನು ಪೂರೈಸಿಕೊಂಡು ಖಂಡಿತ ನಾಟಕಕ್ಕೆ ಹೋಗೋಣ. ನೋಡಿದೆಯಾ ದೈವ ಸಹಾಯ. ನಮಗೇನು ಕಡಿಮೆಯಯ್ಯಾ. ಓಹೋ ಹೊರಡು ೬ ಘಂಟೆಯಾಗುತ್ತಾ ಬಂತು. ಜಾಗ್ರತೆ ಬಾ ಎಂದು ಅವನ ಕೈಲಿ ಗಡಿಯಾರವನ್ನು ಕೊಟ್ಟು ಕಳಿಸಿದನು.

ಪುಟ್ಟನು ಇಂತಹ ಕೆಲ್ಸಗಳಲ್ಲಿ ವಿಶೇಷವಾದ ಬುದ್ಧಿವಂತನೆಂದರೆ ಸಾಕು. ಆಗಲೇ ತನ್ನ ನಿತ್ಯ ಗಿರಾಕಿಯಾದ ಮಾರ್ವಾಡಿಯ ಅಂಗಡಿಗೆ ಬಂದನು ಮಾರ್ವಾಡಿಯವರ ಗುಟ್ಟು ಇಂತಹ ಪ್ರಸಂಗಕ್ಕೆ ಕೈ ಹಚ್ಚಿದ ಮಹನೀಯರಿಗೇ ಗೊತ್ತು ಅದನ್ನು ವಿಶೇಷ ಲೇಖನ ಬೆಳಿಸಿ ವಿಸ್ತರಿಸಬೇಕಾಗಿಲ್ಲ. ಭಂಗಾರದ ಆ ಕೈಗಡಿಯಾರದ ಸಹಜ ಬೆಲೆಯು ಸುಮಾರು ೮೦ ರೂಪಾಯಿಗಳಾಗಬಹುದು. ಅಂತೂ ಇಂತೂ ಮಾರ್ವಾಡಿಯು ಒಂದು ತಿಂಗಳ ಬಡ್ಡಿಯನ್ನು ಮುಂಚೆಯೇ ಹಿಡಿದುಕೊಂಡು ೨೫ ರೂಪಾಯಿಗಳನ್ನು ಕೊಟ್ಟನು. ಕೈಯಲ್ಲಿ ಒಂದು ಬಿಡಿಗಾಸೂ ಇಲ್ಲದ ವೇಳೆಯಲ್ಲಿ ೨೫ ರೂ. ಗಳು ೨೫ ಲಕ್ಷವಲ್ಲವೇ ? ಎಂದುಕೊಂಡು ಆ ಮಂಕು ಭಟ್ಟನಾದ ಪುಟ್ಟನು ಹರ್ಷಾಬ್ಧಿಯಲ್ಲಿ ತೇಲಿ ಮುಳುಗಿ ಶ್ಯಾಮಣ್ಣನ ಮನೆಗೆ ಬಂದನು.

ರಾತ್ರಿಯ ಊಟವು ಪೂರೈಸಿಕೊಂಡು ಎಲ್ಲರೂ ನಾಟಕಶಾಲೆಗೆ. ಹೋಗಿ ರಿಸರ್ವ್‌ಮಾಡಿದ್ದ ಒಂದು ಬಾಕ್ಸಿನಲ್ಲಿ ಕೂತರು. ನಾಟಕವು ಪೂರ್ತಿಯಾಯಿತು. ಎಲ್ಲರೂ ರಾತ್ರಿ ಎಲ್ಲಿ ಹೋಗುವುದೆಂದು ಮಲಗುವುದಕ್ಕೆ ಶಾಮಣ್ಣನ ಮನೆಗೆ ಬಂದರು.

ಭಾನುವಾರ ಸಾಯಂಕಾಲ ವಕೀಲರನ್ನು ನೋಡಬೇಕೆಂದು ತಿಳಿಸಿದ್ದ ಶ್ಯಾಮಣ್ಣನು ವಕೀಲರ ಆಫೀಸಿಗೆ ಬಂದನು. ವಕೀಲರು ಭಾರೀ ವರ್ತಕರೂ ಮೇಲಾಗಿ ತಮ್ಮ ಸ್ನೇಹಿತರೂ ಆದ ಕೇಶವರಾಯರ ಮಗನೆಂಬ ಗೌರವದಿಂದ ಆತನನ್ನು ಮರ್ಯಾದೆಯಿಂದ ಕಂಡು ಕುರ್ಚಿಯಮೇಲೆ ಕೂಡಿಸಿದರು. ಕಿಟ್ಟಿ ಪುಟ್ಟರಿಬ್ಬರೂ ಒಂದು ಬೆಂಚಿನಮೇಲೆ ಕೂತರು. ಶ್ಯಾಮಣ್ಣನು ಬ್ಯಾಂಕಿನ ವಿಷಯವೆಲ್ಲವನ್ನೂ ತಿಳಿಸಿದನು. ವಕೀಲರು ಅಯ್ಯಾ ಶ್ಯಾಮಣ್ಣಾ ! ನಿನಗೆ ಒಂದೂ ಗೊತ್ತಿಲ್ಲ. ನೀನು ಇಂತಹ ಅಪಾಪೋಲಿಯವರ ಜೊತೆಗೆ ಎಂದು ಬಿದ್ದೆಯೋ ಅಂದೇ ನಿನ್ನನ್ನು ಯಾರೂ ನಂಬಲಾರದಂತಾಯ್ತು. ಹೇಗಾದರೂ ಮಾಡು. ನಾನು ನಾಳೆ ದಿನ ೧೧ ಘಂಟೆಗೆ ಬ್ಯಾಂಕಿಗೆ ಬರುತ್ತೇನೆ. ನೀನೂ ಅಲ್ಲಿಗೆ ಬಾ ಹಣವನ್ನು ಕೊಡಿಸುತ್ತೇನೆಂದು ಹೇಳಿ ಕಳಿಸಿದನು. ತರುವಾಯ ಎಲ್ಲರೂ ಅಲ್ಲಿಂದ ಹೊರಟು ಅವರವರ ಮನೆಯನ್ನು ಸೇರಿದರು.

ವಕೀಲ್ ವಾಸುದೇವರಾಯರು ೧೧ ಘಂಟೆಗೆ ಸರಿಯಾಗಿ ಬ್ಯಾಂಕಿಗೆ ಬಂದರು. ಶ್ಯಾಮಣ್ಣನನ್ನು ಹುಡುಕಿದರು. ಸಿಕ್ಕಲಿಲ್ಲ. ಅಯ್ಯೋ ಒಳ್ಳೇ ಅವಿವೇಕನ ಗಂಟು ಬಿತ್ತೇ. ನನ್ನ ಕೇಸ್ ೧೨ ಘಂಟೆಗಿರುವುದಲ್ಲಾ ಎಂದು ಹಲಬುತ್ತಿರುವ ಸಮಯಕ್ಕೆ ತ್ರಿಮೂರ್ತಿಗಳಂತೆ ಕಿಟ್ಟಿಪುಟ್ಟ ಶಾಮಣ್ಣ ಇವರು ಎದುರಿಗೆ ಬಂದು ನಿಂತರು. ಎಲ್ಲರೂ ಕಳ್ಳ ನಮಸ್ಕಾರವನ್ನು ತೋರಿಸುವ ಸಲುವಾಗಿ (Good Afternoon Sir) ವಂದನೆ ಎಂದರು. ವಕೀಲರು

ತರುವಾಯ ಶ್ಯಾಮಣ್ಣನು ಈತನೇ ಎಂದು ಜಾಮೀನ್ ಕೊಟ್ಟು ೧ ಲಕ್ಷ ರೂ. ಕೊಡಿಸಿದರು. ಮತ್ತೆ ಅಯ್ಯಾ ಶ್ಯಾಮಣ್ಣಾ ನಿನಗೆ ಈಗ ಇಷ್ಟು ಹಣ ಏತಕ್ಕೆ? ನಿನ್ನ ವೆಚ್ಚಕ್ಕೆಷ್ಟುಬೇಕೋ ಅಷ್ಟು ತೆಗೆದುಕೊಂಡು ಮಿಕ್ಕದ್ದನ್ನು ಬ್ಯಾಂಕಿನಲ್ಲಿಯೇ ಇಡು. ವ್ಯಾಪಾರವನ್ನು ಸರಿಯಾಗಿ ನೋಡಿಕೋ. ಎನ್ನಲು ಇದೇನು ನಿಮಗೆ ಕಮೀಷನ್ (ಲಂಚ) ಕೊಡಲಿಲ್ಲವೆಂದು ದುಡ್ಡು ಕಿತ್ತುಕೊಳ್ಳುವ ಸಲುವಾಗಿ ಮಾಡುವಿರಾ. ಹೊರಡಿ ಕೋರ್ಟ್‌ನಲ್ಲೇನಾದರೂ ಸಿಕ್ಕುವುದೂ ಹೋಗುತ್ತೆ ಎಂದು ಹಾಸ್ಯಮಾಡುತ್ತಾ ಮೂರು ಜನರೂ ಹೊರಹೊರಟರು.

ಅವಿವೇಕಿಯ ಕೈಲಿನ ದುಡ್ಡಿಗೇನಾದರೂ ಬೆಲೆಯುಂಟೇ? ಮೂರು ಜನರೂ ಬರಬರುತ್ತಾ ಲಷ್ಕರಿಗೆ ಹೋಗಬೇಕೆಂದು ನಿಶ್ಚಯಿಸಿದರು. ಮನೆಗೆ ಬಂದು ಮಧ್ಯಾಹ್ನದ ಫಲಾಹಾರವನ್ನು ಮುಗಿಸಿಕೊಂಡು ಲಷ್ಕರಿಗೆ ಹೊರಟರು ಶ್ಯಾಮಣ್ಣನು, ಪುಟ್ಟು ಈ ಹಣವನ್ನು ಯಾವ ರೀತಿ ಖರ್ಚುಮಾಡಬೇಕೆಂದು ಯೋಚಿಸಿರುತ್ತಿ. ಅದನ್ನು ಬೇಗ ತಿಳಿಸು.

ಪುಟ್ಟ—ಶ್ಯಾಮು ನಿಮ್ಮ ಮನೆಯಲ್ಲಿರುವ ಮೋಟಾರು ಹಳೆಯದು. ಈಗ ೨೦ನೆ ಶತಮಾನ. ಹೊಸ 'ರೋಲ್ಸ್‌ರಾಯ್ಸ್' ಗಾಡಿಯು ಬಂದಿದೆ. ಬಹಳ ಚೆನ್ನಾಗಿದೆ. ಅದನ್ನು ಕೊಂಡುಕೊ. "ಡ್ರೈವರ್" ಯೋಚನೆಯು ನಿನಗೆ ಬೇಡ. ನಾನೇ ನಡೆಸುತ್ತೇನೆ.

ಶ್ಯಾಮಣ್ಣ—ಕಿಟ್ಟು ಇದರಲ್ಲಿ ನಿನ್ನ ಮತವೇನು?

ಕಿಟ್ಟ—ಶ್ಯಾಮಾ! ಇದಕ್ಕಿಂತ ಒಳ್ಳೆಯ ಯೋಚನೆಯೇ? ಪುಟ್ಟನ ಅಭಿಪ್ರಾಯವೇ ನನ್ನದೆಂದು ತಿಳಿ. ಅವನಷ್ಟು ಬುದ್ಧಿವಂತರಿಲ್ಲ. ಹಾಗಾದರೆ ಸರಿ ಎಂದು ಮೂವ್ವರೂ 'ಅಡಿಸನ್ ಕಂಪೆನಿಗೆ ಹೋಗಿ ೩೦,೦೦೦ ರೂ. ಗಳಿಗೆ ಮೋಟಾರನ್ನೂ, ಅದಕ್ಕೆ ಬೇಕಾದ ಸಾಮಾನುಗಳನ್ನು ಮತ್ತು ಇತರ ಫ್ಯಾನ್ಸಿ ಸಾಮಾನುಗಳನ್ನೂ ೧೦೦೦ ರೂ ಗಳಿಗೆ ಕೊಂಡುಕೊಂಡರು. ಅಂತೂ ಒಂದು ಘಂಟೆಯೊಳಗಾಗಿ ೩೧,೦೦೦ ರೂ. ಗಳು ಖರ್ಚಾಯಿತು. ಮೋಟಾರಿನಲ್ಲಿ ಎಲ್ಲರೂ ಕೂತು ದಾರಿಯಲ್ಲಿ ಬರುತ್ತಾ ಆಂಗ್ಲೇಯ (Rippon Restaurant and Refreshment Room) ವಿಶ್ರಾಂತಿಗೃಹವನ್ನು ಹೊಕ್ಕರು. ಅಲ್ಲಿ ಶ್ಯಾಮಣ್ಣನು ಪುಟ್ಟಾ:—ನೀನು ಒಳ್ಳೊಳ್ಳೆ ಇಂದ್ರಭವನಗಳಂತಿರುವುದಕ್ಕೆ ಕರೆದುಕೊಂಡು ಬರುತ್ತಿ. ಶಹಬಾಸ್! ನಿನ್ನಂತಹವನ ಸ್ನೇಹವಿರುವಾಗ ನನಗೇನು ತೊಂದರೆ ಎಂದು ಬೆನ್ನು ತಟ್ಟಿದನು. ಮತ್ತು ನಾವು ಎಂದಿಗೂ ಇಂತಹ ಹೋಟಲಿಗೆ ಬಂದಿರಲಿಲ್ಲ. ಇಷ್ಟರಲ್ಲಿ ಆ ವಿಶ್ರಾಂತಿ ಗೃಹದ(ಬಟ್ಲರ್) ಪರಿಚಾರಕನೊಬ್ಬನು ಅಂದು ತಯಾರಾಗಿ ಸಿದ್ಧವಾಗಿದ್ದ ಫಲಾಹಾರ (ತಿಂಡಿ) ಸಾಮಾನಿನ ಪಟ್ಟಿಯೊಂದನ್ನು ಶ್ಯಾಮಣ್ಣನ ಕೈಗೆ ಕೊಟ್ಟನು. ಅದು ಆಂಗ್ಲೇಯ

(English) ಭಾಷೆಯಲ್ಲಿದ್ದುದರಿಂದ ಒಂದೂ ಗೊತ್ತಾಗದೆ ಹಾಗೂ ಹೀಗೂ ಯೋಚಿಸುತ್ತಾ ಅಲ್ಲೊಂದು ಇಲ್ಲೊಂದು ಎಂದು ನಾಲ್ಕು ಪದಾರ್ಥಗಳನ್ನು ಚುನಾಯಿಸಿದರು. ಅದಾವವೋ ೧. ಕೋಳಿಮಟ್ಟೆ, ೨. ಬಿಸ್ಕತ್, ೩. ಮಾಂಸ, ೪. ಕಾಫಿ-ಟೀ ಯಿತ್ತು. ಬಟ್ಲರನು ತಕ್ಷಣ ಎಲ್ಲವನ್ನೂ ತಟ್ಟೆ (plate) ಗಳಲ್ಲಿ ಇವರ ಮುಂದೆ ತಂದಿಟ್ಟನು. ಇದು ಯಾವ ರೀತಿ ತಿನ್ನಬೇಕೋ ಅದೇ ಇವರಿಗೆ ಗೊತ್ತಿಲ್ಲ. ಎಲ್ಲರ ಮುಖವನ್ನೂ ನೋಡಿದರು. ತರುವಾಯ ಇದೇನೋ ಎಂದು ಮೂವರೂ ಒಂದೊಂದು ಚಂಚದಿಂದ—ಮುಳ್ಳಿನ ಚಂಚದಿಂದ ಹಿಡಿದು—ತಿನ್ನತೊಡಗಿದರು. ತರುವಾಯ ಪುಟ್ಟನು ಶ್ಯಾಮಣ್ಣಾ, ಇಲ್ಲಿ ವಿಸ್ಕಿ (ಮಾದಕದ್ರವ) ಸಿಕ್ಕುತ್ತದೆ. ಅದು ಕುಡಿದರೆ ಸ್ವರ್ಗಸುಖವೇ! ನೋಡು, ಎಂದು ಅದನ್ನು ತರಿಸಿದನು. ಸ್ವಲ್ಪ ರುಚಿಯಿದ್ದಂತೆ ಕಂಡಿತು. ಶ್ಯಾಮಣ್ಣನು ಇನ್ನೊಂದು ಸೀಸಾಯಿಯನ್ನು ತರಿಸಿದನು. ಎಲ್ಲರೂ ಕುಡಿದು ಮುಗಿಸಿದರು. ಬಿಲ್ಲು ೬೫ ರೂ. ಗಳಾಯಿತು. ಅದನ್ನು ಕೊಟ್ಟು ಸ್ವರ್ಗಸುಖದ ಅನುಭವ ಹೊಂದಿ ಜನರಿಗೆ ತೋರಿಸುವರೋ ಎನ್ನುವಂತೆ ಅಲ್ಲಿ ಇಲ್ಲಿ ತೂಗಾಡುತ್ತಾ ಮೋಟಾರಿನ ಬಳಿ ಬಂದರು.

ಮೋಟಾರಿನಲ್ಲಿ ಕೂತು ಮುಂದೆ ಬರುತ್ತಾ ಒಂದು ಸಿನಿಮಾದ ಬಳಿ—ಇಂದು ಸೊಗಸಾದ ನಾಟ್ಯ! ಅದರಲ್ಲೂ ಪ್ಯಾರಿಸ್ ದೇಶದ ನಟಿಯ ನರ್ತನ! ಮತ್ತು ಚಲನಚಿತ್ರಪ್ರದರ್ಶನವೂ ಸಹಾ ಉಂಟು—ಎಂದಿದ್ದುದನ್ನು ಕಂಡರು. ಕಣ್ಣಿಗೆ ಬೀಳುವುದೇ ತಡ. ಶ್ಯಾಮಣ್ಣನು ಹೂ, ರಿಸರ್ವ್ ಬಾಕ್ಸಿಗೆ ಟಿಕೆಟ್ ತೆಗೆದುಕೋ ಎಂದು ಕಿಟ್ಟನಿಗೆ ದುಡ್ಡನ್ನು ಜೇಬಿನಿಂದ ಕೈಗೆ ಬಂದಷ್ಟು ಕೊಟ್ಟನು. ದುಡ್ಡೆಂಬುದು ಶ್ಯಾಮಣ್ಣನಿಗೆ ಹುಣಿಸೆಯ ಬೀಜವಲ್ಲವೇ?

ನಾಟ್ಯವನ್ನು ನೋಡನೋಡುತ್ತಾ ಶ್ಯಾಮಣ್ಣನ ದೃಷ್ಟಿಯೂ ನಾಟ್ಯಗಾತಿಯ ದೃಷ್ಟಿಯೂ ಒಂದಾಯ್ತು. ಇದೊಂದು ಕುರಿ. ನನ್ನ ಬಲೆಗೆ ಜಾಗ್ರತೆ ಬೀಳುವನೆಂದೂಹಿಸಿ ಒಂದು ಕಾಗದದಲ್ಲಿ ತನ್ನ ಮನೆಯ ಅಡ್ರೆಸ್ಸನ್ನು ಬರೆದು, ಇವನ ಮುಖಕ್ಕೆ ಸರಿಯಾಗಿ ಎಸೆದಳು. ಪುಟ್ಟನು ಕೂಡ್ಲೇ ಬಿಚ್ಚಿ ನೋಡಿ ಬಹು ಸಂತೋಷದಿಂದ ಶ್ಯಾಮೂ, ನಿನ್ನ ಅದೃಷ್ಟದಮೇಲೆ ಅದೃಷ್ಟ. ಏನಯ್ಯಾ ಆ ಲೇಡಿಯು ನಿನ್ನನ್ನು ಮೋಹಿಸಿ ಅವಳ ಮನೆಗೆ ಬರುವಂತೆ ತಿಳಿಸಿರುವಳು ನೋಡಿದೆಯಾ? ಎನ್ನಲು ಶ್ಯಾಮಣ್ಣನು ನಿಷಾ ಸೇವನೆಯಿಂದ ಮತ್ತನಾಗಿದ್ದವನು ಸ್ಥಿಮಿತಕ್ಕೆ ಬರಲು, ಇಂದೇ ಅವಳನ್ನು ಹುಡುಕಿಕೊಂಡು ಹೋಗೋಣ ಎಂದನು. ಎಲ್ಲರೂ ಎದ್ದರು. ನಾಟ್ಯವು ಪೂರೈಸಿ ನಾಟ್ಯಗಾತಿಯು ಆಗಲೇ ಮನೆಯನ್ನು ಸೇರಿದ್ದಳು.

ಶ್ಯಾಮಣ್ಣನು ಮಿತ್ರರಿಂದೊಡಗೂಡಿ ಮೋಟಾರಿನಲ್ಲಿ ಬಂದು ನಾಟ್ಯಗಾತಿಯ ಮನೆ ಮುಂದೆ ಇಳಿದನು. ನರ್ತಕಿಯ ಮನೆಯಮುಂದೆ 'ಮಿಸ್ ಷೀರಾ' ಎಂದು ಬರೆದಿತ್ತು. ಮನೆಯ ಮುಂದೆ ಒಬ್ಬ ಸೇವಕನಿದ್ದನು. ಈ ಅವಿವೇಕ ಶಿಖಾಮಣಿಗಳು ಮುಂದೆ ನಿಂತು ನಾವು ಒಳಗೆ ಬರಬಹುದೋ? (May we come in) ಎಂದರು. ಸೇವಕನು ತಮ್ಮ ನಾಮಧೇಯವನ್ನು ತಿಳಿಸಿ, ನಮ್ಮ ಒಡತಿಗೆ ತಿಳಿಸುವೆನು, ಆಕೆಯ ಅಪ್ಪಣೆಯಾದರೆ ಒಳಗೆ ಬಿಡುವೆನೆಂದನು.

ಈ ಅವಿವೇಕಿಗಳ ಹತ್ತಿರ ಭೇಟಿಯ ಚೀಟಿ (Visiting card) ಯೆಲ್ಲಿದೆ? ಒಂದು ಕಾಗದದ ಮೇಲೇ Messrs Sam, Put, Kit want to see you ಎಂದು ಬರೆದು ಕಳುಹಿಸಿದರು. ತರುವಾಯ ಸೇವಕನು ನರ್ತಕಿಯ ಅಪ್ಪಣೆಯಂತೆ ಅವರನ್ನು ಒಳಗೆ ಬಿಟ್ಟನು.

ನರ್ತಕಿಯಾದರೋ ತನ್ನ ಕೈಯಲ್ಲಿ ಒಂದು ಹೊಗೆಯ ಬತ್ತಿಯನ್ನು ಹಿಡಿದುಕೊಂಡು ಆರಾಮಕುರ್ಚಿಯೊಂದರಲ್ಲಿ ಕೂತಿದ್ದಳು. ಎಲ್ಲರೂ ಅವಳೆದುರಿಗಿದ್ದ ಕುರ್ಚಿಗಳಲ್ಲಿ ಕೂತರು. ಶ್ಯಾಮಣ್ಣನು—"ಮಿಸ್ ಷೀರಾ! ನೀನು ನಮಗೆ ಆಂಗ್ಲೇಯ ನರ್ತನ (Dancing) ವನ್ನು ಹೇಳಿಕೊಡುವಿಯಾ? ಎಂದನು. ಅದಕ್ಕೆ ೧,೦೦೦ ರೂಪಾಯಿಗಳ ರುಸುಂ ಕೊಟ್ಟರೆ ಕಲಿಸುತ್ತೇನೆಂದಳು. ಆದರೆ ದುಡ್ಡು ಮೊದಲು ಕೊಡಬೇಕು. ಅದಕ್ಕೆ ಕೆಲವು ಸಾಮಗ್ರಿಗಳನ್ನೊದಗಿಸಬೇಕಾಗುತ್ತದೆ. ಆದ್ದರಿಂದ ನೀವು ೧,೦೦೦ ರೂಪಾಯಿಗಳನ್ನು ಮುಂಗಡ ಕೊಟ್ಟರೆ ನಾನು ನಿಮಗೆ ಆ ವಿದ್ಯೆಯನ್ನು ಕಲಿಸಿಕೊಡುತ್ತೇನೆ ಎನ್ನಲು, ತಕ್ಷಣ ತನ್ನ ಜೇಬಿನಿಂದ ಒಂದು ಸಾವಿರ ರೂಪಾಯಿಗಳನ್ನು ತೆಗೆದುಕೊಟ್ಟನು. ನಂತರ ನರ್ತಕಿಯು ಶಾಮಣ್ಣನನ್ನು ಮರುದಿನ ಬರುವಂತೆ ತಿಳಿಸಿದಳು. ಎಲ್ಲರೂ ಅವಳಿಗೆ ಮರ್ಯಾದೆ (ಮುಜರೆ) ಮಾಡಿ ಹೊರಟು ಅವರವರ ಮನೆಯನ್ನು ಸೇರಿ ಮಲಗಿದರು.

ಇತ್ತ ಸುಗುಣೆಯು ಮೊದಲೇ ಈ ಶಾಮಣ್ಣನ ಅವಿವೇಕವನ್ನು ತಿಳಿದಿದ್ದಳಾದ್ದರಿಂದ ಮನಸ್ಸಿನಲ್ಲಿಯೇ ವಿಷಾದಪಡುತ್ತಿದ್ದಳು. ಈಗಲಾದರೋ ಬ್ಯಾಂಕಿನಿಂದ ೨೦ ಲಕ್ಷ ರೂಪಾಯಿಗಳು ಶಾಮಣ್ಣನ ವಶವಾಯ್ತೆಂದು ತಿಳಿದಕೂಡ್ಲೇ ಅವನಿಗೆ ಸಮಯ ಸಿಕ್ಕಿದಾಗಲೆಲ್ಲ—'ಹೀಗೆ ಹಣವನ್ನು ದುಂದು ಮಾಡಬೇಡ, ವ್ಯಾಪಾರಕ್ಕೆ ಹಾಕು. ವ್ಯಾಪಾರಾಭಿವೃದ್ಧಿ ಮಾಡಿ ಸೌಖ್ಯದಿಂದಿರು' ಎಂದು ಅನೇಕವೇಳೆ ಹೇಳಿಹೇಳಿ ಬೇಸತ್ತು ಬೆಂಡಾದಳು. ಶಾಮಣ್ಣನ ಆನಂದವೇ ಆನಂದ. ಅವನ ದಾರಿಯೇ ಬೇರೆ ಆಯಿತು. ಯಾವಾಗ ನೋಡಿದರೂ ಸ್ನೇಹಿತರ ಜೊತೆಯೇ. ಸುಗುಣೆಯು ಶಾಮಣ್ಣನನ್ನು ಕಾಣಬೇಕೆಂದು ಬಂದಾಗಲೆಲ್ಲಾ ಸ್ನೇಹಿತರೊಡನೆ ಮಾತಾಡುತ್ತಾ ಕುಳಿತಿರುವನು. ಇಂಥಾ ಸಮಯ

ದಲ್ಲಿ ಹೇಗೆ ತಾನೇ ಇವರ ಮುಂದೆ ಬಂದು ಸುಗುಣೆಯು ಶಾಮಣ್ಣನೊಡನೆ ಮಾತಾಡುವುದು ? ಖಿನ್ನಮನಸ್ಕಳಾಗಿ ಹಿಂದಕ್ಕೆ ಹೋಗುತ್ತಿದ್ದಳು. ಇಂದು ಪ್ರಾತಃಕಾಲ ಶಾಮಣ್ಣನು ಅಂಗಡಿಗೆ ಒಬ್ಬನೇ ಬಂದನು. ಸಮಯನಿರೀಕ್ಷಣೆಯಲ್ಲಿದ್ದ ಸುಗುಣೆಯು ಶಾಮಣ್ಣನನ್ನು ನೋಡಿ ಬಹು ಸಂತೋಷಪಟ್ಟಳು. ಪುನಃ ಗಾಬರಿಗೊಂಡು ಮತ್ತೆಲ್ಲಿ ಸ್ನೇಹಿತರು ಬಂದು ಶಾಮಣ್ಣನನ್ನು ಕರೆದುಕೊಂಡು ಹೋಗುವರೋ ಎಂದು ತಿಳಿದು ಶಾಮಣ್ಣನನ್ನು ಕೂಗಿದಳು.

ತರುವಾಯ ಇಬ್ಬರೂ ಒಂದು ಕೊಠಡಿ (ಪ್ರೈವೇಟ್ ರೂಂ) ಗೆ ಬಂದರು. ಸುಗುಣೆಯು ಮೆಲ್ಲನೆ 'ಶಾಮರಾವ್ ! ಇದೇನು ನೀವು ಹೀಗೆ ನಿಮ್ಮ ತಂದೆಯ ಆಸ್ತಿಯನ್ನು ಮನಬಂದಂತೆ ಖರ್ಚು ಮಾಡುವಿರಿ. ಇದು ದುಂದುಗಾರಿಕೆಯಲ್ಲವೇ ? '

ಶಾಮಣ್ಣ—ಸುಗುಣೆ ! ಏನು, ದುಂದುವೆಚ್ಚವೇ ? ನಿನಗಾರು ತಿಳಿಸಿದರು ? ನನ್ನ ಸುಖಕ್ಕಾಗಿ ಖರ್ಚು ಮಾಡುತ್ತೇನೆ. ಅದು ನಿನಗೆ ಸೈರಿಸುವುದಿಲ್ಲವೋ ? ಚೆನ್ನಾಯಿತು. ನಮ್ಮಪ್ಪನ ಹಣವನ್ನು ನಾನು ಖರ್ಚು ಮಾಡಲು ನೀನೂ ಹೀಗೇ ಹೇಳುತ್ತೀ, ಆ ಬಡವಕೀಲನೂ ಹೀಗೇ ಹೊಡೆದುಕೊಳ್ಳುತ್ತಾನೆ. ಏನಿದು ? ನಿನಗೆ ಇದು ದುಃಖವಾಗಿ ಕಂಡರೆ ನಾಳೆಯಿಂದ ಅಂಗಡಿಗೇ ಬರುವುದಿಲ್ಲ. ತಿಳಿಯಿತೋ ? ಇನ್ನು ಮುಂದೆ ಇಂತಹ ಮಾತನ್ನಾಡಬೇಡ.

ಸು—ಅಯ್ಯಾ, ಶಾಮರಾಯರೇ ! ನನಗೆ ದುಃಖವೆಂದಿಗೂ ಇಲ್ಲ. ಮಹಾರಾಯರಂತೆ ಖರ್ಚು ಮಾಡಿ. ಆದರೆ ನಿಮ್ಮ ತಂದೆಯವರು ನನಗೂ ತಂದೆಯಂತಿದ್ದರು. ಅವರು ನನಗೆ ಉಪಕಾರ ಮಾಡಿ ನನ್ನನ್ನು ಅಭಿವೃದ್ಧಿಗೆ ತಂದಿರುತ್ತಾರೆ. ನನ್ನ ಯಜಮಾನರನ್ನೂ ಸಾಕಿ ಸಲಹಿ, ವಿದ್ಯೆಯನ್ನು ಕಲಿಸಿ, ಅಭಿವೃದ್ಧಿಗೆ ತಂದವರೂ ಅವರೇ ಅಲ್ಲವೇ ? ಅಂದಮೇಲೆ ನೀವು ನಮಗೆ ಉಪಕಾರ ಮಾಡಿದ ಧಣಿಯ ಮಕ್ಕಳು. ಆದ್ದರಿಂದ ನಾನು ನಿಮಗೆ ಒಂದೆರಡು ಬುದ್ಧಿವಾದವನ್ನು ಹೇಳಬೇಕಾಗಿದೆ. ಅಲ್ಲದೆ ಕೀರ್ತಿಶೇಷರಾದ ನಿಮ್ಮ ತಂದೆಗೆ ಕೊಟ್ಟಿರುವ ವಾಗ್ದಾನದಂತೆ ನಿಮ್ಮ ಸುಖದುಃಖಗಳನ್ನು ವಿಚಾರಿಸುವ ಭಾರವು ನನ್ನದಾಗಿದೆ. ಅದಿರಲಿ. ಈಗ ನೀವು ಈ ಅಂಗಡಿಯ ಕಾರಭಾರವನ್ನು ಇನ್ನು ೫—೬ ತಿಂಗಳೊಳಗಾಗಿ ವಹಿಸಿ, ೨೦ ಲಕ್ಷ ರೂಗಳನ್ನು ವ್ಯಾಪಾರಕ್ಕೆ ಹಾಕಿ ಯಾವ ವಿಧವಾದ ಅಭಿವೃದ್ಧಿಯನ್ನೂ ತೋರಿಸದಿದ್ದ ಪಕ್ಷದಲ್ಲಿ, ಇಂತಹ ಭಾರೀ ಕಾರ್ಖಾನೆಯು ನಿಮ್ಮ ಕೈತಪ್ಪುವುದು. ಆಗ ವಿಶೇಷ ದುಃಖಪಡಬೇಕಾಗುತ್ತೆ. ಇದಕ್ಕೋಸ್ಕರವೇ ನಿಮ್ಮನ್ನು ಕರೆದು ಇಷ್ಟು ರಹಸ್ಯವಾಗಿ ಹೇಳಬೇಕಾಯಿತು. ಎಂದು ಹೇಳಿ ತನ್ನ ಕಾರ್ಯಕ್ಕೆ ಹೊರಡಲುದ್ಯುಕ್ತಳಾದಳು.

ಇಷ್ಟರಲ್ಲಿ ಶಾಮಣ್ಣನಿಗೂ ಸುಗುಣೆಗೂ ನಡೆಯುತ್ತಿದ್ದ ಸಂಭಾಷಣೆಯನ್ನು

ಮರೆಯಲ್ಲಿ ನಿಂತು ಕೇಳುತ್ತಿದ್ದ ಶಂಕರರಾಯನು ಸುಗುಣೆಯು ಕೊಠಡಿಯನ್ನು ಬಿಟ್ಟುಬರುವುದರೊಳಗಾಗಿ ತನ್ನ ಸ್ಥಾನದಲ್ಲಿ ಬಂದು ಕೂತನು.

ಸುಗುಣೆಯು ಶಾಮಣ್ಣನಿಗೆ ಬುದ್ಧಿವಾದವನ್ನು ಹೇಳಿ ಹೊರಟ ತರುವಾಯ ಶಾಮಣ್ಣನು—ಸರಿ ಸರಿ. ನನ್ನಲ್ಲಿರುವ ೨೦ ಲಕ್ಷ ರೂಗಳು ಖರ್ಚಾದಾಗ ತಾನೆ. ಇವಳ ಮಾತೇನು. ಆ ದುಡ್ಡನ್ನು ವ್ಯಾಪಾರಕ್ಕೆ ಹಾಕಿ ಅದರಿಂದ ಈ ದುಡ್ಡನ್ನು ಕಳೆದುಕೊಂಡರೇನು ಮಾಡಲಿ. ವ್ಯಾಪಾರವೂ ಬೇಡ—ಏನೂ ಬೇಡ ಎಂದು ಗೊಣಗುಟ್ಟುತ್ತಾ ಮನೆಗೆ ಬಂದನು.

ಶಾಮಣ್ಣನಿಗೆ ಊಟವಾದ ಬಳಿಕ ನರ್ತಕಿಯು ಜ್ಞಾಪಕ ಬಂತು. ಕೂಡ್ಲೆ ತಾನೊಬ್ಬನೇ ಮೋಟಾರಿನಲ್ಲಿ ಕುಳಿತು ನರ್ತಕಿಯ ಮನೆಗೆ ಬಂದನು. ಸೇವಕನು ಒಳಗೆ ಬಿಡದಂತೆ ಶಾಮಣ್ಣನನ್ನು ತಡೆದನು. ಬಲಾತ್ಕಾರದಿಂದ ಸೇವಕನನ್ನು ತಳ್ಳಿ ಒಳಹೊಕ್ಕನು. ಅಪ್ಪಣೆಯಿಲ್ಲದೆ ಒಳಗೆಬಂದ ಶಾಮಣ್ಣನನ್ನು ಕಂಡು ನರ್ತಕಿಯು ರೇಗಿದಳು. ಸ್ವಲ್ಪಹೊತ್ತು ಒಬ್ಬರಿಗೊಬ್ಬರಿಗೆ ಬಿಸಿಮಾತುಗಳು ನಡೆಯಿತು. ಕೊನೆಗೆ ಶಾಮಣ್ಣನು ನರ್ತಕಿಯನ್ನು ಕುರಿತು, ಎಲೈ ನರ್ತಕಿಯೇ ನೀನು ಹೇಳಿದ ಪ್ರಕಾರ ಇಂದು ನಿನ್ನಲ್ಲಿಗೆ ಬಂದಿರುವೆನು. ನಿನ್ನ ವಾಗ್ದಾನದಂತೆ ನನಗೆ ನರ್ತನವನ್ನು ಕಲಿಸು. ಎಂದನು. ನರ್ತಕಿಯು ಹಾಸ್ಯಮಾಡುತ್ತಾ (You rascal) ಎಲೈ ದುರುಳಾ! ನೀನು ಜಾತಿಯಲ್ಲಿ ಒಂದು. ನಮ್ಮಂತೆ ವೇಷಧಾರಿಯಾಗಿದ್ದು ನಿಜವಾದ ಪಾಶ್ಚಿಮಾತ್ಯನಲ್ಲ ಇಂಥಾ ನಿನಗೆ ನಾನು ವಿದ್ಯೆ ಕಲಿಸುವುದೇ, ಎಂದಿಗೂ ಇಲ್ಲ. ನೀನು ಕೊಟ್ಟ ೧೦೦೦ ರೂಪಾಯಿಗಳು ನನ್ನ [illegible] ಮೊತ್ತಾಡಿದ ರುಸುಂ (fees) [illegible] ಇಲ್ಲಿಂದ ಮೊದಲು ಹೊರಡು. ಇಲ್ಲದಿದ್ದರೆ ಅರ್ಥಸಂಗ್ರಹ ಯೋಗ್ಯನಾಗುವುದೂ ಅಲ್ಲದೆ, ನನ್ನ ಮನೆಗೆ ಅನ್ಯಪ್ರವೇಶ (Trespass) ಮಾಡಿದ್ದಕ್ಕಾಗಿ [illegible] ನಿನ್ನನ್ನು ಅರೆಸ್ಟ್ ಮಾಡುವಂತೆ ಠಾಣೆಗೆ (ವರ್ತಮಾನಪತ್ರಿಕೆಯ [illegible]) ತಿಳಿಸುವೆನು [illegible] ಎಂದಳು ಈ ರೀತಿ ನುಡಿದ ನರ್ತಕಿಯೊಡನೆ ಹೆಚ್ಚು ಮಾತಾಡದೆ, ನಮ್ಮ ಶಾಮಣ್ಣನು ದುಡ್ಡನ್ನು ಕಳೆದುಕೊಂಡು ಪೆಚ್ಚುಮೋರೆಯಿಂದ ಮನೆಯನ್ನು ಸೇರಿದನ.

ವಾಚಕ ಮಹಾಶಯಾ! ನಮ್ಮ ಶಾಮಣ್ಣನು [illegible] ಆ ಪಾಶ್ಚಿಮಾತ್ಯ ಹೆಂಗಸಿನಿಂದ ತಿರಸ್ಕರಿಸಲ್ಪಟ್ಟನು ನೋಡಿದಿರಾ? ನೀವೂ ಕೂಡಾ ಅದೇ ರೀತಿ ಎಷ್ಟೋ ವೇಳೆ ಮೋಸಹೋಗುವಿರಲ್ಲವೆ? ಎಷ್ಟೋ ಮೋಸಹೋಗುತ್ತಿರುವಿರಲ್ಲವೆ? ಇಷ್ಟಬಿದ್ದ ಆಸ್ತಿಪಾಸ್ತಿಗಳನ್ನೆಲ್ಲಾ ಹಾಳುಮಾಡಿಕೊಂಡು ಠಕ್ಕಿನಂತಹ ವಿದ್ಯೆಯನ್ನು ಕಲಿತು ಥಳಥಳಿಸುವ ವೇಷಭೂಷಣಗಳನ್ನು ಹೊಂದಿ ಇತರರಂತೆ ವರ್ತಿಸಲು ಹೋದರೆ ಅದು ಸಾಧ್ಯವಾದೀತೆ? ಈಗಿನ ತರುಣ ಭಾರತ

ವರ್ಷದ ಸ್ಥಿತಿಯು ಅದೇರೀತಿಯುಳ್ಳಿಲ್ಲವೆ? ಇಷ್ಟು ಮಾಡಿನರೂ ಪ್ರಯೋಜನ ವೇನಾದರೂ ಉಂಟೇ? ಅಜ್ಞೇಯದಿಂದ ಬಂದ ನಮ್ಮ ನಮ್ಮ ಸದಾಚಾರ ವನ್ನು ಬಿಟ್ಟು ನಮ್ಮ ನಮ್ಮ ಪವಿತ್ರಗ್ರಂಥಗಳನ್ನೂ ಲಕ್ಷಿಸದೆ, ನೀಚ ವ್ಯಸನಗಳಲ್ಲಿ ಸಂಚರಿಸಿ, ಇಹಪರಗಳೆರಡೂ ಇಲ್ಲದೆ ಅಧಃಪಾತಾಳದಲ್ಲಿ ದಿನವಹಿ ಬೀಳುತ್ತಿರು ವವರನ್ನು ನೋಡುತ್ತಿರುವೆವಲ್ಲವೇ? ನೀವೇ ಯೋಚಿಸಿ? ಆದಕಾರಣ ಇತರ ರಂತೆ ವರ್ತಿಸುವ ಮನಸ್ಸನ್ನು ಬಿಟ್ಟು ಪೂಜ್ಯಭಾರತ ಮಾತೆಯುದರದಲ್ಲಿ ಜನಿ ಸಿರುವ ನಾವೆಲ್ಲರೂ, ನಮ್ಮ ನಮ್ಮ, ಆಚಾರ, ಶೀಲ, ಸ್ವಭಾವ, ನಡೆನುಡಿಗಳು ಇವೇ ಮೊದಲಾದವುಗಳಲ್ಲಿ ವರ್ತಿಸುತ್ತಾ ಬಂದರೆ ಈಗ ಪ್ರತ್ಯಕ್ಷ ನಾವು ನೋಡುತ್ತಿರುವ ಭಾರತ ವರ್ಷದ (ದಾರಿದ್ರ್ಯಾವಸ್ಥೆ) ಕಷ್ಟಪರಂಪರೆಗಳು ದೂರ ತೊಲಗುವುದರಲ್ಲೇನು ತಾನೆ ಸಂದೇಹ?

ಇತ್ತ ಪುಟ್ಟನೂ ಕಿಟ್ಟನೂ ಶ್ಯಾಮಣ್ಣನ ಬರುವಿಕೆಯನ್ನೇ ಎದುರು ನೋ ಡುತ್ತಾ ಮನೆಯಲ್ಲಿ ಕೂತಿದ್ದರು. ಶ್ಯಾಮಣ್ಣನು ಮನೆಯೊಳಗೆ ಪ್ರವೇಶ ಮಾಡಿದ ಕೂಡ್ಲೇ ಪುಟ್ಟನು ಆತನ ಮುಖಚಿಹ್ನೆಯಿಂದ ಏನೋ ಅಭಾಸ ನಡೆದಂತಿದೆ. ಇರಲಿ ಎಂದು ವಿಚಾರಮಾಡಿ ಶ್ಯಾಮಣ್ಣನಿಂದ ಎಲ್ಲವನ್ನೂ ತಿಳಿದನು. ತರು ವಾಯ ಪುಟ್ಟನು ಶ್ಯಾಮು ಇದಕ್ಕೇಕೆ ಇಷ್ಟು ಚಿಂತೆ? ನಾನು ನಿನಗೆ ಬೇಕಾ ದರೆ ಆ ನರ್ತಕಿಗಿಂತಲೂ ಉತ್ತಮಳಾದ ಓರ್ವ ಸುಂದರಿಯನ್ನು ತೋರಿಸುವೆನು. ನೀನು ದುಃಖಡಬೇಡ. ಈಗಲೇ ನಡಿ ಎಂದು ಅವನನ್ನೂ ಎಳೆದುಕೊಂಡು ಕಿಟ್ಟನೊಡನೆ ಮೋಟಾರಿನಲ್ಲಿ ಕೂತು ಓರ್ವ ವೇಶ್ಯೆಯ ಮನೆಗೆ ಬಂದನು.

ಪುಟ್ಟನು ಆ ಮನೆಯಮುಂದಿದ್ದ ಮುದುಕಿಯನ್ನು ಕಂಡು ಅಮ್ಮ ಕು ಮಾರಿಯು ಇರುವಳೇ ಎಂದನು. ಕೂಡ್ಲೆ ಮುದುಕಿಯು ಇರುವಳೆಂದು ತಲೆ ಯಾಡಿಸಲು ಎಲ್ಲರೂ ಒಳಹೊಕ್ಕರು. ದಿವಾನ್‌ಖಾನೆಯಲ್ಲಿ ಹಾಸಿದ್ದ ರತ್ನಕಂಬ ಳಿಯಮೇಲೆ ಕೂತರು ಓರ್ವ ಸುಂದರ ತರುಣಿಯು ಮೆಲ್ಲಮೆಲ್ಲನೆ ಬಂದು ಪುಟ್ಟನ ಎದುರಿಗೆ ನಿಂತಳು. ಪುಟ್ಟನು ಮೊದಲೇ ಶ್ಯಾಮಣ್ಣನ ವಿಷಯವನ್ನು ಆ ಸುಂದರಿಗೆ ತಿಳಿಸಿದ್ದನಾದ್ದರಿಂದ (ಶ್ಯಾಮಣ್ಣನನ್ನು ಕರೆಯುವಂತೆ ಸಂಜ್ಞೆ ಮಾ ಡಿದನು).

ಆ ವೇಶ್ಯೆಯ ಹೆಸರು ಸುಂದರಿ. ಸುಂದರಿಯು ನವೀನ ಪದ್ಧತಿಗಳಿಗನು ಸಾರವಾಗಿ ಅತಿ ಸೂಕ್ಷ್ಮತರವಾದ ಉತ್ತಮ ಶಿಲ್ಕಿನ ಉಡುಪುತೊಡಪುಗಳನ್ನು ಧರಿಸಿಕೊಂಡು ಅಲಂಕಾರಯುಕ್ತಳಾಗಿದ್ದಳು. ಪುಟ್ಟನ ಸಂಜ್ಞೆಯಂತೆ ಶ್ಯಾಮ ಣ್ಣನನ್ನು ಸುಂದರಿಯು ಕರೆಯಲು ಶ್ಯಾಮಣ್ಣನು ಅವಳನ್ನು ಹಿಂಬಾಲಿಸಿ ಒಂದು ಕೊಠಡಿಗೆ ಬಂದನು ತರುವಾಯ ಇಬ್ಬರಿಗೂ ಸಂಭಾಷಣೆಯು ಬಹಳ ಹೊತ್ತು ಜರುಗಿತು. ಕೊನೆಯಲ್ಲಿ ಸುಂದರಿಯು ಪ್ರಿಯಾ! ನೀವು ನನಗೆ

ಒಂದು ದಿವ್ಯ ಭವನವನ್ನು ಕೊಂಡುಕೊಟ್ಟರೆ ನಾನು ನಿಮ್ಮೊಡನೆ ಅಲ್ಲಿಯೇ ವಾಸಿಸುವೆನು. ನರ್ತನವನ್ನು ಕಲಿಸುವೆನು. ಹಾಗಿಲ್ಲದ ಪಕ್ಷದಲ್ಲಿ ನನ್ನನು ನೀವು ಸೇರಲಾಗದು. ಹಾಗೆ ಮಾಡಿದರೆ ನಾವಿಬ್ಬರೂ ಅನ್ಯೋನ್ಯದಿಂದಿರಬಹುದು. ಇದು ನಿಮಗೆ ಸಾಧ್ಯವೇ ಎನ್ನಲು, ಇಷ್ಟೇತಾನೇ ಇಂದೇ ಈ ಕಾರ್ಯವಾಯ್ತೆಂದು ತಿಳಿ ಎಂದು ಸಮಾಧಾನಪಡಿಸಿದನು. ತರುವಾಯ ಪುಟ್ಟಕಿಟ್ಟರಿಂದೊಡಗೂಡಿ ಶ್ಯಾಮಣ್ಣನು ಒಂದು ದೊಡ್ಡ ಭವನವನ್ನು ೧೦ ಲಕ್ಷ ರೂ.ಗಳಿಗೆ ಕೊಂಡನು. ಸುಂದರಿಯನ್ನು ಕರೆದು ಅದನ್ನು ತೋರಿಸಲು ಬಹು ಸಂತೋಷಹೊಂದಿ, ಈ ಭವನಕ್ಕೆ "ಶ್ಯಾಮಸುಂದರಾ" ಎಂದು ನಾಮಕರಣಮಾಡಿದಳು. ಅಂತೂ ಈ ಮನೆಯೇ ಶ್ಯಾಮಣ್ಣನಿಗೂ ಆವಾಸಸ್ಥಾನವಾದಂತಾಯಿತು. ಸುಂದರಿಯು—ಪ್ರಿಯಾ, ಇದಕ್ಕೆ ಬೇಕಾದ ಸಾಮಾನುಗಳನ್ನು ತರಬೇಕು. ನನಗೆ ಒಡವೆಯನ್ನು ತಂದುಕೊಡಬೇಕು ಎಂದು ಹೇಳಲು ಸುಂದರಿಯೊಡನೆ ಆಕ್ಷಣವೇ ತನ್ನ ಅಂಗಡಿಗೆ ಬಂದು ವಿಧವಿಧವಾದ ಸಾಮಾನುಗಳನ್ನು ತಂದನು. ಎಲ್ಲವೂ ೮ ಲಕ್ಷ ರೂ.ಗಳ ಬಿಲ್ಲಾಯಿತು, ಸುಗುಣೆಯ ಎದೆಯು ಹಾರಿಹೋಯಿತು. ಆದರೆ ಏನೊಂದು ಮಾತೂ ಆಡದೆ ಸುಮ್ಮನಿದ್ದಳು. ಅಂತೂ 'ಶ್ಯಾಮಸುಂದರ' ಭವನವು ಇಂದ್ರಭವನದಂತಿತ್ತು. ಹೀಗೆಯೇ ಶ್ಯಾಮಣ್ಣನು ಸುಂದರಿಯೊಡನೆಯೂ, ತನ್ನ ಮಿತ್ರರೊಡನೆಯೂ ಆರು ತಿಂಗಳ ಕಾಲ ಕಳೆದನು.

ಇತ್ತ ಸುಗುಣೆಯು ಶ್ಯಾಮಣ್ಣನು ಇಷ್ಟು ಬೇಗ ಇಂಥ ದುರ್ಗತಿಗೆ ಬರುವನೆಂದು ಸ್ವಪ್ನದಲ್ಲೂ ತಿಳಿದಿರಲಿಲ್ಲ. ಒಂದೊಂದು ವೇಳೆ ತನ್ನ ತಂಗಿಯಾದ ಸರಳೆಯನ್ನು ನೆನಸಿಕೊಂಡು ಅಯ್ಯೋ! ಶ್ಯಾಮಣ್ಣನಿಗೆ ನಿನ್ನನ್ನು ಕೊಟ್ಟು ಲಗ್ನಮಾಡುವೆನೆಂದು ಬಹು ಸಂತೋಷದಿಂದಿದ್ದೆನೇ ಶ್ಯಾಮಣ್ಣನಂತೂ ದಾರಿತಪ್ಪಿ ಬಹುದೂರ ಹೋಗಿರುವನು. (ಜಾತಿ ಕುಲವೊಂದೂ ಇಲ್ಲ. ಅನಾಚಾರಸಂಪನ್ನನಾದನು.) ಇರಲಿ ನನ್ನ ಕೈಲಾದಮಟ್ಟಿಗೂ ಪ್ರಯತ್ನಮಾಡುವೆನು ಆತನ ತಪ್ಪನ್ನು ಆತನಿಗೇ ತೋರಿಸುವೆನು ಎಂದಂದುಕೊಂಡು ಸಮಯಪರೀಕ್ಷೆಯಲ್ಲಿದ್ದಳು

ನಮ್ಮ ಅವಿವೇಕಶಿಖಾಮಣಿಯಾದ ಶ್ಯಾಮಣ್ಣನು ತನ್ನ ವಿಚಿತ್ರ ಮಿತ್ರರೊಂದಿಗೆ ಇಂದೇನು, ಸಿನೀಮಾ, ಇವತ್ತೇನು ನಾಟಕ, ಜೂಜು, ಕುಡಿತ ಇವುಗಳಿಂದ ಕೈಲಿದ್ದ ದುಡ್ಡನ್ನು ವೆಚ್ಚಮಾಡುತ್ತ ಬಂದನು. ಭಾಗ್ಯಲಕ್ಷ್ಮಿಯು ಬರಬೇಕಾದರೆ ಕಷ್ಟ. ಒಂದಾವರ್ತಿ ಬಂದರೆ ಅದು ಪೂರ್ವಜನ್ಮದ ಸುಕೃತ. ಅದನ್ನು ಯಾವರೀತಿ ಅನುಭವಿಸಬೇಕೆಂಬುದನ್ನು ತಿಳಿಯದಿದ್ದ ಅವಿವೇಕಿಯನ್ನು ಕ್ಷಿಪ್ರದಲ್ಲಿಯೇ ದರಿದ್ರಲಕ್ಷ್ಮಿಯು ವರಿಸುವಳು. ಅಂತೇ ನಮ್ಮ ಶ್ಯಾಮಣ್ಣನೂ ಕೂಡ

ಹಾಗಾಡಿಹೇಗಾಡಿ ೯ ತಿಂಗಳೊಳಗಾಗಿ ತನ್ನ ಕೈಗೆ ಬಂದಿದ್ದ ೨೦ಲಕ್ಷ ರೂಪಾಯಿಗಳನ್ನು ಹಾಳುಮಾಡಿದನು. ಇನ್ನು ದರಿದ್ರಲಕ್ಷ್ಮಿಯು ತನ್ನ ಪ್ರಭಾವವನ್ನು ತೋರಿಸದೇ ಬಿಡುವಳೇ?

## ತೃತೀಯ ಪರಿಚ್ಛೇದ

### ಕಷ್ಟ—ನಷ್ಟ



ಶಂಕರರಾಯನು ಮೇಲೆ ನೋಡುವುದಕ್ಕೆ ಸಭ್ಯನೇ. ಒಳಗೆ ಮಾತ್ರ ಕಿಚ್ಚು ಯಾವಾಗಲೂ ಉರಿಯುತ್ತಿರುವ ಸ್ವಭಾವವೇ. ಅಂದು ಶಾಮಣ್ಣನೂ ಸುಗುಣೆಯೂ ಮಾತಾಡಿಕೊಳ್ಳುತ್ತಿದ್ದುದನ್ನು ತನ್ನ ಕಿವಿಯಾರ ಕೇಳಿದ್ದನು. ಅಲ್ಲದೆ ತನ್ನ ಹೆಂಡತಿಯೂ ಕೂಡ ಆ ಪೋಲಿ ಶಾಮಣ್ಣನ ಕಡೆಯೇ ಇರುವಳೇ ಎಂಬ ಕೋಪ ಬೇರೆ. ಶಾಮಣ್ಣನಿಗೆ ಬುದ್ಧಿವಾದವನ್ನು ಹೇಳಿ ಒಳ್ಳೆಯ ದಾರಿಗೆ ತರಬೇಕೆಂದು ನನ್ನನ್ನು ಯಾವಾಗ ನೋಡಿದರೂ ಹೇಳುತ್ತಿರುವಳು. ಇದರಿಂದ ಇವಳಿಗೇನು ಲಾಭವೋ ತಿಳಿಯದಲ್ಲಾ? ಈಗಾಗಲೇ ಕೇಶವರಾಯನು ಸತ್ತು ಎಂಟು ತಿಂಗಳು ಕಳೆಯಿತು. ಹಾಗೆಯೇ ಇನ್ನು ನಾಲ್ಕು ತಿಂಗಳು ಕಳೆದು ಹೋಗಿ ಶಾಮಣ್ಣನು ಇದೇ ರೀತಿ ಅವಿವೇಕಿಯಾಗಿ ವ್ಯಾಪಾರಾಭಿವೃದ್ಧಿ ಮಾಡದಿದ್ದರೆ ಇಂತಹ ಭಾರೀ ಅಂಗಡಿಗೆ ನಾನೇ ಯಜಮಾನನಾಗುವೆನಲ್ಲವೇ? ಇದು ನನ್ನ ಹೆಂಡತಿ, ಆ ಹಾಳು ಸುಗುಣೆಗೆ ತಿಳಿದಿದ್ದರೂ ಕೂಡ ಅವನನ್ನು ಪುನಃಪುನಃ ಕೆಣಕಿ ಸನ್ಮಾರ್ಗದಲ್ಲಿ ನಡಿ ಎಂದು ಬೋಧಿಸುವಳಲ್ಲಾ? ಇರಲಿ, ನನ್ನ ಆಲೋಚನೆಗಳಿಗೆ ಕಲ್ಲು ಹಾಕಲು ಇಂತಹ ಹೆಂಗಸರ ಕೈಲಾದೀತೆ? ಎಂದು ಹಾಗೆಯೇ ಶಾಮಣ್ಣನ ಲೆಖ್ಖವನ್ನು ನೋಡುತ್ತಾ ಬಂದನು.

ಪ್ರಿಯ ವಾಚಕಮಹಾಶಯರೇ, ನೋಡಿದಿರಾ ಶಂಕರರಾಯನ ಮನೋವಿಕಾರತೆ! ಕೇಶವರಾಯರ ಮರಣಕಾಲದಲ್ಲಿ ವಾಗ್ದಾನ ಮಾಡಿದ್ದು ಎಲ್ಲಿಯೋ, ಯಾವ ಕಾಲವಲ್ಲೋ ಹಾರಿಹೋಯಿತು ಆಗಲೇ ಆ ಪರದೇಶಿಯೂ ಅವಿವೇಕಿಯೂ ಆದ ಶಾಮಣ್ಣನಮೇಲೆ ಕತ್ತಿ ಮಸೆಯಹತ್ತಿರುವನು. ಇದೆಲ್ಲವೂ ಈ ವಿಚಿತ್ರಕಾಲಗತಿಯ ಮಹಿಮೆಯಲ್ಲವೇ? ಇನ್ನು ಸುಗುಣೆಯ ಮನಸ್ಸು ನೋಡಿ, ಯಾವ ರೀತಿ ಇರುವುದು. ಎಷ್ಟಾದರೂ ಹೆಂಗರುಳು. ಆಡಿದ ಮಾತಿನಂತೆ ಶಾಮಣ್ಣನ ಕಷ್ಟಸುಖಗಳನ್ನು ವಿಚಾರಿಸಲು ಬದ್ಧಕಂಕಣಳಾಗಿರುವಳು. ಇದನ್ನು ನೋಡಿದರೆ ಪ್ರಪಂಚದಲ್ಲಿ ಒಬ್ಬರ ಮನಸ್ಸಿನಂತೆ ಒಬ್ಬರಮನಸ್ಸಿ

ಬಹು ವಿರಳವಲ್ಲವೇ ? ಇಬ್ಬರೂ ಒಂದೇ ತರಹ ವಾಗ್ದಾನ ಮಾಡಿದ್ದಾರೆ. ಸ್ವಲ್ಪ ಕಾಲದಲ್ಲೇ ವ್ಯತ್ಯಾಸ ಬಂತು. ಇದು ಕಲಿಪುರುಷನ ಮಹಿಮೆ. ಇದು ಹಾಗಿರಲಿ. ಮುಂದೆ ಏನಾಯ್ತೆಂಬುದನ್ನು ವಿಚಾರ ಮಾಡೋಣ.

ಹಾಗೆಯೇ ಲೆಕ್ಕವನ್ನು ಹುಡುಕುತ್ತಿದ್ದ ಶಂಕರರಾಯನು, ಅಂಗಡಿಯಿಂದ ಸಾಮಾನನ್ನು ತೆಗೆದುಕೊಂಡುಹೋಗಿ ಆರು ತಿಂಗಳಾದರೂ ಶಾಮಣ್ಣನು ಒಂದು ಕಾಸನ್ನೂ ಕೊಟ್ಟಿಲ್ಲವೆಂದು ತಿಳಿದನು. ಕೂಡ್ಲೆ ಕೋರ್ಟಿನ ಮೂಲಕ ಅಧಿಕಾರವನ್ನು ಹೊಂದಿ ಮನೆಯನ್ನು ಜಫ್ತಿ ಮಾಡಲು ಅಮೀನನೊಡನೆ ಶಾಮಣ್ಣನ ಮನೆಗೆ ಹೋಗಲನುವಾದನು. ಅಷ್ಟರಲ್ಲಿ ಸುಗುಣೆಯು ಹಾಗೆಯೇ ಯೋಚಿಸಿದಳು. ಇದೇನು ನನ್ನ ಪತಿಯು ಈ ರೀತಿ ದುಡುಕಿದರು. ಆ ಹಸುಳೆ ಯಾದ ಶಾಮಣ್ಣನನ್ನು ಏನಾದರೊಂದು ಉಪಾಯಾಂತರದಿಂದ ದಾರಿಗೆ ತಂದು ಅಂಗಡಿಗೆ ಬರಬೇಕಾದ ಬಾಕಿಯನ್ನು ವಸೂಲು ಮಾಡದೆ ಈ ರೀತಿ ದುಡುಕಿದ ರಲ್ಲಾ. ಅಯ್ಯೋ! ಅದೂ ಅಲ್ಲದೆ ಅವನ ತಂದೆಯ ಉಪ್ಪನ್ನು ತಿಂದು ಇಂಥಾ ಅಭಿವೃದ್ಧಿಸ್ಥಿತಿಗೆ ಬಂದಿದ್ದರೂ ಆತನ ಮಗನಮೇಲೆ ಇಷ್ಟು ಆಕ್ರೋಶವು ನನ್ನ ಪತಿಗೆ ಇಷ್ಟುಬೇಗ ಬರಲು ಕಾರಣವೇನು? ಹೇಗಾದರೂ ಈ ಅವಮಾನವು ಉಂಟಾಗದಂತೆ ನನ್ನ ಪತಿಯನ್ನು ಬೇಡುವೆನೆಂದು ಪತಿಯ ಸಮೀಪಕ್ಕೆ ಬಂದಳು.

ಸುಗುಣೆ—ಪ್ರಿಯಾ, ಇದೇನು ತಾವು ಇಂತಹ ಅಚಾತುರ್ಯಕಾರ್ಯ ವನ್ನು ಆ ಕಂದನಮೇಲೆ ತೋರಿಸಿರುವಿರಲ್ಲಾ ?

ಶಂಕರರಾಯ—ಪ್ರಿಯೆ, ಸುಗುಣೆ, ನನ್ನದು ಅಚಾತುರ್ಯ ಕಾರ್ಯವೇ?

ಸು—ಹೌದು. ನೀವೇ ಯೋಚಿಸಿ. ಹೀಗೆ ಮಾಡುವ ಬದಲು ಅವನಿಗೆ ಸನ್ಮಾರ್ಗವನ್ನು ತೋರಿ ಒಳ್ಳೆಯ ಸ್ಥಿತಿಗೆ ತರುವುದು ನಮ್ಮ ಕಾರ್ಯವಲ್ಲವೇ ?

ಶಂ—ಆ ಪೋಲಿಯನ್ನು ಸನ್ಮಾರ್ಗಕ್ಕೆ ತರುವುದೇ ? ಇರಲಿ. ಅವನ ಮೇಲೆ ನಿನಗೇಕೆ ಇಷ್ಟು ಮಮತೆ ?

ಸು—ನನಗಿರುವಷ್ಟು ನಿಮಗೂ ಇರಬೇಕಲ್ಲವೇ? ಕೇಶವರಾಯರ ಮರಣ ಕಾಲದಲ್ಲಿ ಆತನಿಗೆ ನಾವು ಕೊಟ್ಟ ವಾಗ್ದಾನವನ್ನು ಜ್ಞಾಪಿಸಿಕೊಳ್ಳಿ.

ಶಂ—ನನಗೇ ಬಾಯಿಮುಚ್ಚಿಸುವೆಯಾ ? ನಿನ್ನ ವಿದ್ಯೆಯೆಲ್ಲಾ ನನಗೆ ತಿಳಿಯುವುದು ಇರಲಿ. ಅವನನ್ನು ನಾನು ಪ್ರೀತಿಸುವೆನು ಎಂದು ಬಾಯಿ ಬಿಟ್ಟು ಹೇಳಬಾರದೇ ?

ಸು—ಅದರಲ್ಲೇನು ಅಂತಹ ಮುಚ್ಚುಮರೆ. ಆತನು, ನಮ್ಮನ್ನು ಕಾಪಾಡಿ ಅಭಿವೃದ್ಧಿಗೆ ತಂದ ಧಣಿಯ ಮಗನು. ಅಂದಮೇಲೆ ನನ್ನ ಮಗನಂತೆಯೇ ಪ್ರೀತಿಸುವೆನು. ಇದಕ್ಕೇಕಿಷ್ಟು ದುಗುಡ ?

ಶಂ—ಸಾಕು! ಬಿಡು! ನಿನ್ನ ಹೆಚ್ಚು ಹರಟೆಯು ನನಗವಶ್ಯಕವಿಲ್ಲ. ಈಗ ಶಾಮಣ್ಣನು ಅಂಗಡಿಗೆ ಕೊಡಬೇಕಾದ ಬಾಕಿಯನ್ನು ಕೊಟ್ಟಿಲ್ಲ. ೬ ತಿಂಗಳ ಕಾಲವು ಕಳೆಯಿತು. ಇಗೋ ಈ ಆರ್ಡರನ್ನು ತೆಗೆದುಕೊಂಡುಹೋಗಿ ಅವನ ಮನೆಯನ್ನು ಜಪ್ತಿಮಾಡಿಸುವೆನೆಂದು ಹೇಳಿ ತನ್ನ ಜತೆಯಲ್ಲಿ ಅಮೀನ ನನ್ನು ಕರೆದುಕೊಂಡು ಹೊರಟನು.

ಸುಗುಣೆಯು ಖಿನ್ನಳಾದಳು. ಕಣ್ಣುಗಳು ಅಶ್ರುಪೂರಿತವಾಗಿ ಕಣ್ಣೇ ಕಾಣಿಸದಂತಾಯಿತು. ಎಷ್ಟೇ ಆದರೂ ಪುತ್ರವಾತ್ಸಲ್ಯ. ತನ್ನ ಮಗನಾದ ರೇನು? ಸಾಕಿದ ಧಣಿಯು ಮಗನಾದರೇನು? ಹಾಗೆಯೇ ಕಣ್ಣೀರಿಡುತ್ತಾ ಕುರ್ಚಿಯಲ್ಲಿ ಕೂತಳು. ತಂದೆತಾಯಿಗಳಿಲ್ಲದ ಶಾಮಣ್ಣನಿಗೆ ಇಂತಹ ಕಷ್ಟ ಬಂತೇ ಎಂದು ಹಾಗೆಯೇ ಮೇಲಕ್ಕೆದ್ದಳು. ಓಹೋ ಇನ್ನು ನಾನು ಕಾಲವಿ ಳಂಬಮಾಡಬಾರದು. ನನ್ನ ಪತಿಯೂ ಕೂಡ ಎಂದೂ ನನ್ನನ್ನು ತಿರಸ್ಕರಿಸ ದವರು ಇಂದು ತಿರಸ್ಕರಿಸಿ ಆ ಹಸುಳೆಯ ಮೇಲೆ ಈ ರೀತಿ ಅಧಿಕಾರಮಾಡಲು ಹೋಗಿರುವುದರಿಂದ ಏನೋ ಪ್ರಬಲಕಾರಣವಿದೆಯೆಂದು ತಿಳಿದು ಮೋಟಾರಿನಲ್ಲಿ ಕೂತು ಜಾಗ್ರತೆ ಶ್ಯಾಮಣ್ಣನ ಮನೆಗೆ ಬಂದಳು. ಎಲ್ಲ ಸಮಾಚಾರವನ್ನೂ ಶ್ಯಾಮಣ್ಣನಿಗೆ ತಿಳಿಸಿ ಶ್ಯಾಮೂ ಈಗಲಾದರೂ ನಿನಗೆ ಒಳ್ಳೆಯದಕ್ಕಾಗಿ ನಾನು ಹೇಳುವ ಮಾತನ್ನು ಕೇಳು. ನಿನಗೆ ಬೇಕಾದ ಸಂಗತಿಯನ್ನು "ನನ್ನಿಂದ ತಿಳಿ ದುಕೋ" ಅದರಿಂದ ನೀನು ಸುಖಪಡುವೆ. ಈಗ ನಿನ್ನಲ್ಲಿರುವ ಸಾಮಾನು ಗಳನ್ನೆಲ್ಲಾ ಈ ತಕ್ಷಣ ಅಂಗಡಿಗೆ ಗಾಡಿಯಮೇಲೆ ಕಳಿಸು. ಮತ್ತೆ ಒಡವೆಗ ಗಳನ್ನು ನನ್ನ ಕೈಯಲ್ಲಿ ಕೊಡು. ಸಾಮಾನು ವಾಪ್ಸು ಬಂದಿದುದಕ್ಕೆ ನಿನಗೆ ರಸೀತಿಯನ್ನು ಕೊಡುವೆನು ಎಂದು ಹೇಳಿದಳು. ತರುವಾಯ ಶಾಮಣ್ಣನು ಎಲ್ಲವನ್ನೂ ಗಾಡಿಯೊಳಗೆ ತುಂಬಿ ಅಂಗಡಿಗೆ ಕಳಿಸಿದನು. ಪಟ್ಟಿಯ ಪ್ರಕಾರ ಶಂಟ ಸಾಮಾನುಗಳೆಲ್ಲವೂ ವಾಪ್ಸು ಅಂಗಡಿಗೆ ಹೋಯಿತು. ಆದರೆ ವಜ್ರದ ಬಹುಬೆಲೆಬಾಳುವ ಉಂಗುರವು ಮಾತ್ರ ಬರಲಿಲ್ಲ. ಸುಗುಣೆಯು ಶಾಮಣ್ಣಾ ಉಂಗುರವನ್ನು ಕೊಡು ಎಂದಳು. ಶಾಮಣ್ಣನು ಸುಗುಣೆ ಅದನ್ನು ಮಾತ್ರ ಕೇಳಬೇಡ. ಅದು ಸುಂದರಿಯ ಕೈಲಿದೆ. ಅವಳದನ್ನು ಕೊಡುವುದಿಲ್ಲ. ಅವ ಳನ್ನು ಕೇಳಿ ಆ ಉಂಗುರವನ್ನು ತರುವುದಕ್ಕಿಂತ ನಾನು ಸಾಯುವುದೇ ಲೇಸು. ದಯವಿಟ್ಟು ಈಗ ಉಂಟಾಗಲಿರುವ ಅವಮಾನದಿಂದ ಬಿಡುಗಡೆ ಮಾಡು ಎಂದು ಬೇಡಿಕೊಂಡನು. ಸುಗುಣೆಯು ಶಾಮಣ್ಣಾ ಆ ಉಂಗುರವನ್ನು ಹೇಗಾ ದರೂ ಮಾಡಿ ವಾಪ್ಸು ಮಾಡಲೇಬೇಕು. ಇಂದಿಲ್ಲದಿದ್ದರೂ ಎಂದಾದರೂ ಸಮ ಯಸಿಕ್ಕಿದಾಗ ಅದನ್ನು ಅವಳಿಂದ ತೆಗೆದು ನನಗೆ ಕಳುಹಿಸು ಎಂದು ಹೇಳಿ ವಾಪ ಸುಬಂದ ಸಾಮಾನುಗಳಿಗೆ ರಸೀತಿಕೊಟ್ಟು ಹೊರಟುಹೋದಳು. ಸಾಮಾನು ಗಳೂ ಅಂಗಡಿಗೆ ಬಂದವು.

ಇತ್ತ ಅಮೀನನೊಡನೆ ಬಂದ ಶಂಕರರಾಯನು ಶಾಮಣ್ಣನಿಗೆ ಜಫ್ತಿಮಾಡಲು ಆರ್ಡರ್ ತೋರಿಸಿದನು. ಶಾಮಣ್ಣನು ನಕ್ಕು ಸುಗುಣೆಯು ಕೊಟ್ಟಿದ್ದ ರಸೀತಿಯನ್ನು ಅಮೀನನಿಗೆ ತೋರಿಸಲು, ಅಮೀನನು ಶಂಕರರಾವ್, ಇದೇನು ಇವರಿಂದ ಎಲ್ಲ ಸಾಮಾನುಗಳು ಅಂಗಡಿಗೆ ಸಂದಿದೆ ಎಂಬ ರಸೀತಿ ಇರಲು ನೀವು ಹೇಗೆ ಜಫ್ತಿಮಾಡುವಿರಿ. ನಡಿಯಿರಿ. ಒಳ್ಳೆ ಗಿರಾಕಿ. ನಿಮ್ಮಂತಹವರ ದೆಸೆಯಿಂದ ನಮಗೂ ಅವಮಾನವೆಂದು ಗೊಣಗುಟ್ಟುತ್ತಾ ಅಮೀನನು ಹೊರಟು ಹೋದನು. ಇತ್ತ ಶಂಕರರಾಯನು ಇದೇನು. ಎಂತಹ ಮೋಸ, ಎಂದು ರಸೀತಿಯನ್ನು ತಿರುಗಿ ನೋಡಿದನು. ಸುಗುಣೆಯ ಸಹಿ ಇದ್ದದ್ದನ್ನು ಕಂಡು, ಎಲ್ಲಕ್ಕೂ ಇವಳೇ ಕಾರಣಳೆಂದು ತಿಳಿದು ರೋಷಾನ್ವಿತನಾಗಿ ಅಂಗಡಿಗೆ ಹಿಂತಿರುಗಿದನು.

ಇತ್ತ ವಕೀಲರಾದ ವಾಸುದೇವರಾಯರು ಶಾಮಣ್ಣನು ಬ್ಯಾಂಕಿನಿಂದ ತೆಗೆದ ಹಣವನ್ನು ೮ ತಿಂಗಳೊಳಗಾಗಿ ಖರ್ಚುಮಾಡಿರುವುದನ್ನು ತಿಳಿದು ಅವನಿಗೆ ಒಂದೆರಡು ಬುದ್ಧಿವಾದವನ್ನು ತಿಳಿಸುವ ಸಲುವಾಗಿ ಶಾಮಣ್ಣನ ಮನೆಗೆ ಬಂದರು.

ಸುಂದರಿಯೊಡನೆ ಸರಸಸಲ್ಲಾಪಮಾಡುತ್ತಿದ್ದ ಶಾಮಣ್ಣನು ವಾಸುದೇವರಾಯರನ್ನು ಕಂಡು ಸುಂದರಿಯನ್ನು ಒಳಗೆ ಕಳುಹಿಸಿದನು. ತರುವಾಯ ವಾಸುದೇವರಾಯರು ಶಾಮಣ್ಣಾ ನೀನು ದುಡ್ಡನ್ನು ಅವಿವೇಕತನದಿಂದಲೂ, ದುಂದುಗಾರಿಕೆಯಿಂದಲೂ ಹಾಳುಮಾಡಿರುತ್ತಿ. ಈಗಲಾದರೂ ನಿನ್ನ ಅವಿವೇಕಕ್ಕಾಗಿ ಪಶ್ಚಾತ್ತಾಪಪಟ್ಟೆಲಿ. ವಿವೇಕವನ್ನು "ನನ್ನಿಂದ ತಿಳಿದುಕೋ" ಇಲ್ಲದಿದ್ದರೆ ಇದಕ್ಕಿಂತಲೂ ಹೆಚ್ಚಾದ ಕಷ್ಟಪಡುವಿ. ಈಗ ನೀನು ಇನ್ನು ವ್ಯಾಪಾರದ ಆಡಳಿತವನ್ನು ನಿನ್ನ ಕೈಲಿ ತೆಗೆದುಕೊ. ನಿಮ್ಮ ತಂದೆಯ ವಿಲ್ಲಿನ ಪ್ರಕಾರ ಇನ್ನು ನಾಲ್ಕು ತಿಂಗಳು ಹೀಗೆ ಅವಿವೇಕದಿಂದ ಕಾಲಕಳೆದರೆ, ವ್ಯಾಪಾರದ ಸರ್ವಸ್ವವೂ ನಿನ್ನ ಶಂಕರರಾಯನಿಗೆ ಸೇರುವದು. ಆಗ ನೀನು ಕೆಲಸಕಾರ್ಯವೂ ಇಲ್ಲದೆ, ಅಂಗಡಿಯೂ ಸಿಕ್ಕದೆ ಭಿಕ್ಷೆಬೇಡಬೇಕಾಗುವುದು. ಕೇವಲ ನೀನು ನನ್ನ ಮಿತ್ರ ಕೇಶವರಾಯನ ಪುತ್ರನಾದ್ದರಿಂದ ಇಷ್ಟು ವಿಷಯವನ್ನು ತಿಳಿಸಿದೆನು. ಇಂದೇ ಆ ಶಂಕರರಾಯನಿಗೆ ಅಂಗಡಿಯ ಸರ್ವಸ್ವಾತಂತ್ರ್ಯವನ್ನೂ ನಿನಗೆ ವಹಿಸುವಂತೆ ಆತನಿಗೆ ಸೂಚಿಸುತ್ತೇನೆ. ನಾಳೆಯಿಂದ ನೀನು ಆ ಕಾರ್ಯದಲ್ಲುದ್ಯುಕ್ತನಾಗಬೇಕೆಂದು ತಿಳಿಸಿ ಅಲ್ಲಿಂದ ಹೊರಹೊರಟನು.

ಶಂಕರರಾಯನು ಅಂಗಡಿಗೆ ಬಂದು ತನ್ನ ಸಖಿಯು ಮಾಡಿದ ಕಾರ್ಯಕ್ಕಾಗಿ ಮನಸ್ಸಿನಲ್ಲೇ ಕುದಿಯುತ್ತ ಇಲ್ಲಿ ಮಾತಾಡಲು ಸಮಯವಲ್ಲೆಂದು ತಿಳಿದು ತನ್ನ ಕಾರ್ಯದಲ್ಲುದ್ಯುಕ್ತನಾದನು. ಸ್ವಲ್ಪ ಹೊತ್ತಿನಮೇಲೆ ಲಾಯರ್

ವಾಸುದೇವರಾಯರಿಂದ ಬಂದ ಒಂದು ಲಕ್ಕೋಟಿಯನ್ನು ಒಬ್ಬ ಸೇವಕನು ತಂದು ಶಂಕರರಾಯನ ಮೇಜಿನಮೇಲಿಟ್ಟು ದೂರಸಾರಿದನು. ಅದರಮೇಲೆ (notice) ಸೂಚನಾಪತ್ರವೊಂದಿರಲು ಆತುರದಿಂದ ಶಂಕರರಾಯನು ಓದ ತೊಡಗಿದನ :—ಆ ಒಕ್ಕಣೆಯ ಸಾರಾಂಶವಾದರೋ ಈ ರೀತಿ ಇತ್ತು:— ಲೇಟ್ ಕೇಶವರಾಯರ ಮರಣಶಾಸನದಮೇಲೆ ಮ್ಯಾನೇಜರ್ ಶಂಕರರಾಯರಿಗೆ ಪುತ್ರರೂ ನಮ್ಮ ಕಕ್ಷಿಗಾರರೂ ಆದ ಶಾಮರಾಯರಿಗೆ ಈ ಪತ್ರ ತಲಪಿದ ೨೪ ಘಂಟೆಯೊಳಗಾಗಿ, ಕೇವರಾಯರ ಅಂಗಡಿಯ ಸರ್ವ ಸ್ವಾತಂತ್ರ್ಯವನ್ನೂ ವಹಿಸುವದು.

(ಸಹಿ) ಶಾಮರಾಯರ ಪರವಾಗಿ
ವಕೀಲ ವಾಸುದೇವರಾವ್.

ಶಂಕರರಾಯನು ಇದನ್ನು ಓದಕೂಡ್ಲೆ ಮೈ ರೋಮಾಂಚವಾಯ್ತು. ಇದೂ ನನ್ನ ಹೆಂಡತಿಯ ಕಾರ್ಯವೇ ಇರಬೇಕು, ಎಂದು ಯೋಚಿಸುತ್ತಾ ಈ ರೀತಿ ಜವಾಬನ್ನು ವಕೀಲರಿಗೆ ಬರದನು.

ವಾಸುದೇವರಾಯರಿಗೆ:—

ನಿಮ್ಮ ನೋಟೀಸು ಪ್ರಕಾರ ಇಂದೇ ನಿಮ್ಮ ಕಕ್ಷಿಗಾರರಾದ ಶಾಮರಾಯರಿಗೆ ಅಂಗಡಿಯ ಸರ್ವಸ್ವಾತಂತ್ರ್ಯಾಧಿಕಾರವನ್ನೂ ಒಪ್ಪಿಸುತ್ತೇನೆ. ನಾಳೆಲಾಗಾಯ್ತು ಯಾವ ವಿಧವಾದ ಆಡಳಿತಗಳಿಗೂ ನಾನು ಜವಾಬ್ದಾರನಲ್ಲ

(ಸಹಿ) ಶಂಕರರಾವ್.

ತರುವಾಯ ತನ್ನ ಕಾರ್ಯದಲ್ಲಿ ವಿಶೇಷ ಸಹಾಯಕನೂ, ಮಿತ್ರನೂ ಅಂಗಡಿಯ ಅಸಿಸ್ಟೆಂಟ್ ಮ್ಯಾನೇಜರೂ ಆದ ರಾಮಲಾಲನನ್ನು ಕರೆದು, ಅಯ್ಯಾ ಎಂದು ಆತನಿಗೆ ಎಲ್ಲಾ ಸಂಗತಿಗಳನ್ನೂ ತಿಳಿಸಿ ಕೂಡ್ಲೆ ಕೆಲವು ಗೋಪ್ಯವಾದ ಕಾಗದಗಳನ್ನು ಕೆಲವೆಡೆಗೆ ಬರೆಯುವಂತೆ ತಿಳಿಸಿದನು. ಅದರಲ್ಲಿ ಮುಖ್ಯವಾಗಿ ತಮ್ಮ ಅಂಗಡಿಯ ಹಣವನ್ನು ಠೇವಣಿ ಇಟ್ಟಿದ್ದ ಬ್ಯಾಂಕಿನ ಮ್ಯಾನೇಜರಿಗೆ ಈ ರೀತಿ ಕಾಗದ ಬರೆಸಿದನು. "ಅಯ್ಯಾ ಇನ್ನು ೪ ತಿಂಗಳುಕಾಲ, ಈ ಅಂಗಡಿಯ ಸರ್ವಾಧಿಕಾರಿಯಾಗಿದ್ದ ನಾನು ಕಾರಣಾಂತರದಿಂದ ಶಾಮರಾಯನೆಂಬುವನಿಗೆ ವಹಿಸಿರುತ್ತೇನೆಯಾಗಿ ಆತನಿಗೆ ಯಾವವಿಧವಾದ ಸಾಲಸೋಲಗಳನ್ನೂ ಕೊಡಕೂಡದೆಂದು ಈ ಮೂಲಕ ಎಚ್ಚರಿಸುತ್ತೇನೆ. ಅಲ್ಲದೆ ಈ ಕಂಪೆನಿಯ ಲಾಭ ನಷ್ಟಗಳಿಗೆ ನಾನು ಜವಾಬ್ದಾರನಲ್ಲ.

(ಸಹಿ) ಶಂಕರರಾವ್."

ಈ ರೀತಿ ಇನ್ನೂ ಅನೇಕ (ಅಂಗಡಿಗೆ ಸಹಾಯಕರಾದ) ಕಂಪೆನಿಗಳಿಗೆಲ್ಲಾ ಬರೆಸಿ ತನ್ನ ಸಹಿಯನ್ನು ಹಾಕಿ ಕಳಿಸಿದನು.

ಅಂದಿನ ಕಾರ್ಯಕಲಾಪಗಳನ್ನೆಲ್ಲಾ ಮುಗಿಸಿ ತನ್ನನ್ನು ಆಗಾಗ್ಗೆ ನೋಡು ವಂತೆ ರಾಮಲಾಲನಿಗೆ ತಿಳಿಸಿ ಶಂಕರರಾಯನು ಮನೆಗೆ ಬಂದನು.

ಇತ್ತ ಸುಗುಣೆಯು ಅಂಗಡಿಯ ಕಾರ್ಯವನ್ನು ಪೂರೈಸಿಕೊಂಡು ಮನೆಗೆ ಬಂದಳು. ಊಟ ಉಪಚಾರಗಳು ಆದ ಮೇಲೆ ಸತಿಪತಿಗಳಿಗೆ ಈ ರೀತಿ ಸಂಭಾಷಣೆಯು ಜರುಗಿತು.

ಶಂಕರರಾಯ—ಸುಗುಣೆ, ನನ್ನ ಮೇಲೆ ನೀನು ಹಠಸಾಧಿಸಬೇಕೆಂದಿರು ವೆಯಾ? ಅದೆಂದಿಗೂ ನಡೆಯಲಾರದು.

ಸುಗುಣೆ—ಪ್ರಿಯಾ! ಇದೇನು ಹೀಗೆ ಹೇಳುವಿರಿ. ಹಠವ್ಯಾವುದು?

ಶಂ—ಏನೂ ತಿಳಿಯದವಳಂತೆ ನನ್ನೊಡನೆ ಮಾತಾಡಬೇಡ. ಹಠ ವೇ, ಆ ಅವಿವೇಕಿಯೊಂದಿಗೆ ನನಗೆ ತಿಳಿಯದಂತೆ ಸಂಭಾಷಣೆಮಾಡುವುದು ಅಲ್ಲದೆ ಆವನಿಗೆ ಸಹಾಯಮಾಡುವುದು. ಇದು ಹಠವಲ್ಲವೊ ?

ಸು—ಅದು ಹೇಗೆ ? ನ್ಯಾಯವರಿತು ನನ್ನ ಕೈಲಾದ ಸಹಾಯಮಾಡು ವುದು ಧರ್ಮವೆಂದು ತಿಳಿದು ಆದಕ್ಕೆ ಪ್ರಯತ್ನಪಟ್ಟೆನು.

ಶಂ—ಎಂತಹ ನ್ಯಾಯ ? ಸಾಮಾನನ್ನು ತೆಗೆದುಕೊಂಡುಹೋಗಿ ಬಹಳ ದಿವಸಗಳವರೂ ದುಡ್ಡು ಅಥವಾ ಸಾಮಾನು ವಾಪ್ಸು ಕೊಡದಿರುವಂಥ ನೀಚ ನಿಗೆ ಸಹಾಯವೋ ? ಅಲ್ಲದೆ ನಿನ್ನ ಪತಿಯ ಹಿತಚಿಂತನೆಗೆ ಅಡ್ಡಬರುವುದು ನಿನಗೆ ಸಮ್ಮತವೋ ?

ಸು—ಪ್ರಿಯಾ ! ಕೋಪಿಸಬೇಡಿ, ಆತನ ತಂದೆಯ ಉಪ್ಪನ್ನು ತಿಂದು ನಾವಿಬ್ಬರೂ ಆಭಿವೃದ್ಧಿಗೆ ಬಂದಿರುವೆವೆಂದು ಜ್ಞಾಪಕದಲ್ಲಿಟ್ಟುಕೊಂಡು ಆ ಋಣ ವನ್ನು ತೀರಿಸಲು, ಆಪತ್ಕಾಲದಲ್ಲಿ ಅತನ ಮಗನಿಗೆ ಸಹಾಯಮಾಡಲು ನಾವಿ ಬ್ಬರೂ ಬದ್ಧಕಂಕಣರಾಗಿರಬೇಕಲ್ಲವೆ ? ನೀವೇ ಯೋಚಿಸಿ ?

ಶಂ—ಈ ತಪ್ಪುಗಳು ನನಗೂ ತಿಳಿದೇ ಇದೆ. ಗೊಡ್ಡು ಹರಟೆಯನ್ನು ಹರಟ ನಿನ್ನ ವಾಕ್ಚಾತುರ್ಯದಿಂದ ನನ್ನನ್ನು ಮರುಳು ಮಾಡಬೇಡ. ವಾಸು ದೇವರಾಯರು ನನಗೆ ನೋಟೀಸ್ ಕೊಟ್ಟಿರುವುದನ್ನು ನೋಡು, ಎಂದು ಅದ ನ್ನು ತೋರಿಸಿ ಇದಕ್ಕೆಲ್ಲಾ ನೀನೇ ಮೂಲಕಾರಣಳಲ್ಲವೋ ? ನಾಳೆಯಿಂದ ಆತನು ಸರ್ವಾಧಿಕಾರಿಯಾದರೆ ನನಗಿದ್ದ ಗೌರವವು ಕೆಡುವುದಿಲ್ಲವೋ ?

ಸು—ಹೇಗೆ ಕೆಡುವುದು ? ಆತನು ಸರ್ವಾಧಿಕಾರಿಯಾದರೆ ತಮಗೆ ಕೇಶವರಾಯರ ಕಾಲದಲ್ಲಿ ಇದ್ದ ಮ್ಯಾನೇಜರ್ ಕೆಲಸವು ಈಗಲೂ ಇರುವುದ ರಲ್ಲೇನು ಸಂಶಯ. ಅಲ್ಲದೆ ಕೇಶವರಾಯರ ಮರಣಶಾಸನದಂತೆ ಆತನ ತರುವಾಯ ಶಾಮಣ್ಣನು ಸರ್ವಾಧಿಕಾರಿಯಾಗಲು ತಮಗೇತಕ್ಕೆ ಇಷ್ಟು ವ್ಯಥೆ? ಇದು ನ್ಯಾಯವಲ್ಲವೇ?

ಶಂ—ಸಾಕು ಬಾಯಿಮುಚ್ಚು ! ನಿನ್ನ ಪತಿಗೆ ಸಹಾಯ ಮಾಡುವುದನ್ನು ಬಿಟ್ಟು ಆತನ ಆಜ್ಞೆಯನ್ನೂ ಮೀರಿ ಒಬ್ಬ ಅವಿವೇಕಿಯ ಮೋಹಕ್ಕೆ ಬಿದ್ದು ನನಗೇ ಎದುರುಮಾತಾಡುತ್ತಿರುವೆಯಾ ?

ಸು—ಏನು ನಿಮ್ಮ ಆಜ್ಞೆಯನ್ನು ಎಂದಾದರೂ ಮೀರಿರುವೆನೇ ? ಈಗ ತಾವು ಕೈ ಹಾಕಿರುವ ಕಾರ್ಯವು ಅಧರ್ಮವೆಂದು ತಿಳಿದ ತಮ್ಮ ಕಷ್ಟನಷ್ಟಗಳಿಗೆ ಭಾಗಿಯಾದ ನಾನು ತಿಳಿಸಿದೆನಲ್ಲದೆ ಬೇರೆ ಇಲ್ಲ.

ಶಂ—ಈಗ ನಾನು ಹೇಳಿದಂತೆ ಕೆಲಸ ಮಾಡುವಿಯಾ ಅಥವಾ ಆ ಅವಿವೇಕಿಗೆ ಒತ್ತಾಸೆಯಾಗಿರುವೆಯಾ ? ಬೇಗ ತಿಳಿಸು.

ಸು—ತಾವು ಹೇಳುವ ಕಾರ್ಯವು ಧರ್ಮಸಮ್ಮತವಾಗಿದ್ದಲ್ಲಿ ತಮ್ಮ ಆಜ್ಞೆಗೆ ಸೇವಕಳು ಸಿದ್ಧಳಿರುವಳು.

ಶಂ—ಹಾಗಾದರೆ ನಾಳೆಯೇ ನಾನು ಅಂಗಡಿಯ ಸರ್ವಾಧಿಕಾರವನ್ನೂ ಶಾಮಣ್ಣನಿಗೆ ಒಪ್ಪಿಸಿಬಿಡುವೆನು. ಆದ್ದರಿಂದ ನೀನೂ ನಿನ್ನ ಕೆಲಸವನ್ನು ಬಿಟ್ಟು ನಾಳೆ ನನ್ನ ಜತೆಯಲ್ಲಿ ಬೊಂಬಾಯಿಗೆ ಬರಬೇಕು

ಸು—ಇದೇನು ! ಆ ಬಾಲಕನಮೇಲೆ ಇಷ್ಟು ಆಗ್ರಹ ಮಾಡಿಕೊಂಡು ಏನೂ ತಿಳಿಯದ ಹಸುಳೆಯ ಕೊರಳಿಗೆ ಅಂಗಡಿಯನ್ನು ಕಟ್ಟಿ ಹೊರಡುವುದೇ ! ಏನು ಮಾಡಿದಂತಾಯ್ತು. ಸ್ವಲ್ಪ ದಿನಗಳೊಳಗಾಗಿ ಸುಂದರ ಕಾರ್ಯಕ್ಕೆ ಪುನಃ ಕೈಹಾಕಿ ಅಂಗಡಿಯೂ ಅವನ ಕೈಬಿಡುವುದು. ಆತನೂ ಹಾಳಾಗುವನು. ಇದರಿಂದ ನಮ್ಮ ವಾಗ್ದಾನವು ಕೆಡುವುದು. ಆದ್ದರಿಂದ ಸ್ವಲ್ಪಕಾಲ ಇಲ್ಲಿಯೇ ಇದ್ದು ಆತನಿಗೆ ಸಲಹೆಯನ್ನು ಆಗಾಗ ಹೇಳಿ ಅವನು ಅಭಿವೃದ್ಧಿಗೆ ಬಂದಮೇಲೆ ಎಲ್ಲಿಯಾದರೂ ಹೋಗೋಣ. ಈಗ ಬೇಡ.

ಶಂ—ನೋಡಿದೆಯೋ ನಿನ್ನ ಹಠ. ಇದು ಹಠವಲ್ಲದೆ ಮತ್ತೇನು ?

ಸು—ಹಾಗಾದರೆ ಉಪಕಾರ ಮಾಡಿದವರಿಗೆ ಅಪಕಾರ ಮಾಡುವುದು ಉಚಿತವೋ ? ಇದು ನಮಗೆ ಒಳ್ಳೆಯದೋ ?

ಶಂ—ಒಳ್ಳೆಯದೋ ಕೆಟ್ಟದ್ದೋ ಅದು ನನಗೆ ಬೇಡ.

ಸು—ಹಾಗಾದರೆ ಶಾಮಣ್ಣನು ಹಾಳಾಗುವನಲ್ಲಾ ?

ಶಂ—ಅದರಿಂದ ನನಗೇನು ? ನಾಳೆ ಬರುವೆಯೋ ಇಲ್ಲವೋ ತಿಳಿಸು.

ಸು—ತನ್ನ ಮನಸ್ಸಿನಲ್ಲೇ ಯೋಚಿಸಿದಳು. ಆಹಾ ನನ್ನ ಪತಿಗೆ ಇಂತಹ ದುರ್ಬುದ್ಧಿಯೇಕೆ ಹುಟ್ಟಿತು ? ಪತಿಯೇ ಪರದೈವವೆಂದು ತಿಳಿದಿದ್ದಾಗ್ಯೂ ಈಗ ಪತಿಯಾಜ್ಞೆಯನ್ನು ಮೀರುವ ಕಾಲ ಬಂತು. ಮತ್ತೊಂದು ಕಡೆ ನನ್ನನ್ನು ಕಾಪಾಡಿ ತಂದೆಯಂತೆ ಪ್ರಿಯನಾಗಿದ್ದ ಕೇಶವರಾಯನಿಗೆ ಶಾಮಣ್ಣನ ಕಷ್ಟನಷ್ಟಗಳಿಗೆ ನಾನೇ ಬಾಧ್ಯಳೆಂದು ವಚನ ಕೊಟ್ಟಿರುವೆನು. ಅಂತೂ ಈ ಉಭಯ

ಸಂಕಟಗಳಿಗೊಳಗಾಗಿರುವೆನು. ಪತಿಯಾಜ್ಞೆಯನ್ನು ಮೀರುವುದು ಧರ್ಮ ವಲ್ಲ. ಆದರೂ ಆಪತ್ಕಾಲಕ್ಕೆ ತಕ್ಕಂತೆ ಧರ್ಮಸೂಕ್ಷ್ಮವನ್ನರಿತು ಕೆಲಸ ಮಾಡಬೇಕೆಂದು ತಿಳಿದು, ಪ್ರಿಯಾ ನಾನು ನಿಮ್ಮೊಡನೆ ಬರಲಾಗುವುದಿಲ್ಲವೆಂದು ತಿಳಿಸಿದಳು.

ಶಂ—ಬರಲಾಗುವುದಿಲ್ಲವೇ ? ಇರಲಿ. ಇದರ ಫಲವನ್ನು ಶೀಘ್ರದಲ್ಲಿ ಕಾಣುವೆ ಎಂದು ತನ್ನ ಕೊಠಡಿಗೆ ಹೋಗಿ ಮಲಗಿದನು.

ಸುಗುಣೆಯೂ ಕೂಡ ಸರಳೆಯಿಂದೊಡಗೂಡಿ ತಾನೂ ಮಲಗಿದಳು. ವಾಚಕಮಹಾಶಯರೇ ! ನೋಡಿದಿರಾ ಶಂಕರರಾಯನ ಕೃತಘ್ನತೆ. ಕೇಶವ ರಾಯನ ಉಪಕಾರವು ಎಲ್ಲಿಯೋ ಮಾಯವಾಯಿತು. ದುಡ್ಡು (ಹಣ), ಅಧಿ ಕಾರದ ಮದವಲ್ಲವೇ ಇದು! ಏನಾದರೂ ಮಾಡಿ ಶಾಮಣ್ಣನನ್ನು ಹಾಳುಮಾಡಿ ಅಂಗಡಿಯ ಯಜಮಾನನಾಗಬೇಕೆಂದು ಬಯಸುತ್ತಿರುವ ನಮ್ಮ ಶಂಕರರಾ ಯನ ಪರಿಣಾಮವು ಯಾವ ರೀತಿಯಾಗುವುದೋ ಎಂದು ನಿಮ್ಮ ಮನಸ್ಸು ಹಾರಾಡುತ್ತಿರಬಹುದು. ಬಿಗಿ ಹಿಡಿಯಿರಿ ; ಮುಂದೇನಾಯಿತೆಂಬುದನ್ನು ವಿಚಾರಿಸೋಣ !

ಮಾರನೇದಿನ ಶಂಕರರಾಯನು ಅಂಗಡಿಗೆ ಬಂದು ಲೆಕ್ಕಪತ್ರಗಳನ್ನೆಲ್ಲಾ ಪರಿಶೋಧಿಸಿ, ಅಂಗಡಿಯ ಜಮಾಖರ್ಚು (ಅಂದಿನವರೆಗೂ ನಡೆದಿರುವುದನ್ನು) ಪಟ್ಟಿಹಾಕಿ ಅಂಗಡಿಯ ಎಲ್ಲಾ ಲೆಖ್ಖಪತ್ರಗಳನ್ನು ಶಾಮಣ್ಣನಿಗೆ ಒಪ್ಪಿಸುವ ಸಲುವಾಗಿ ಕಾದಿದ್ದನು.

ಇತ್ತ ಶಾಮಣ್ಣನು ವಕೀಲರಾದ ವಾಸುದೇವರಾಯರಿಂದಲೂ ತನ್ನ ಚಿತ್ರವಿಚಿತ್ರಪ್ರಿಯರಿಂದಲೂ ಕೂಡಿ ಅಂಗಡಿಗೆ ಬಂದನು. ಶಂಕರರಾಯನು ಶಾಮಣ್ಣನನ್ನು ಕಂಡರೂ ಮರ್ಯಾದೆ ಮಾಡದೆ ವಾಸುದೇವರಾಯರಿಗೆ ಎಲ್ಲ ವನ್ನೂ ಒಪ್ಪಿಸಿ, ತನ್ನ ಜವಾಬ್ದಾರಿಯೊಂದೂ ಇನ್ನು ಮೇಲೆ ಇಲ್ಲವೆಂದು ಅವ ರಿಂದ ಅಪ್ಪಣೆ ಪಡೆದು ಹೊರಡಲುದ್ಯುಕ್ತನಾದನು. ಹಾಗೆಯೇ ಬರುತ್ತಾ ತನ್ನ ಸ್ನೇಹಿತನಾದ ರಾಮಲಾಲನಿಗೆ ಹೊರಗೆ ಬರುವಂತೆ ಸಂಜ್ಞೆಮಾಡಿ ತಾನು ಹೊರಗಡೆ ಬಂದನು. ಸ್ವಲ್ಪಹೊತ್ತಿನೊಳಗಾಗಿ ರಾಮಲಾಲನು ಈಚೆಗೆ ಬರಲು ಶಂಕರರಾಯನು, ರಾಮಲಾಲ ! ಇಂದಿನಿಂದ ಈ ಅಂಗಡಿಯ ಜವಾಬ್ದಾರಿಯು ನನ್ನ ಕೈತಪ್ಪಿರುವುದನ್ನು ನೀನೇ ನೋಡಿರುವೆಯಷ್ಟೆ. ಈಗ ಮುಖ್ಯವಾಗಿ ನಿನ್ನ ಸಹಾಯವು ನನಗೆ ಬೇಕಾಗಿರುವುದು. ನನ್ನೊಡನೆ ವಾಗ್ದಾನ ಕೊಡು. ಮುಂದೆ ನೀನೂ ದೊಡ್ಡ ಅಧಿಕಾರಿಯಾಗುವಿ. ಎಂದು ಅವನಿಂದ ವಾಗ್ದಾನ ತೆಗೆದುಕೊಂಡು ಮುಂದಿನ ಕಾರ್ಯಗಳಿಗೆ ಅಂದು ಸಾಯಂಕಾಲ ತನ್ನ ಮನೆಗೆ ಬರುವಂತೆ ತಿಳಿಸಿ ಶಂಕರರಾಯನು ಮನೆಗೆ ಬಂದನು.

ವಾಸುದೇವರಾಯರು ಅಂಗಡಿಯ ಸೆಕ್ರೆಟರಿಯಾದ ಸುಗುಣೆಯನ್ನು ಕರೆದು, ಸುಗುಣಾ! ಇನ್ನು ಮುಂದೆ ನಿನ್ನಿಂದ ಈ ಅಂಗಡಿಯು ಅಭಿವೃದ್ಧಿಯಾಗಬೇಕಲ್ಲದೆ ಈ ಶಾಮಣ್ಣನು ಹೆಸರಿಗೆ ಯಜಮಾನನು. ನೀನೂ ಕೈಬಿಟ್ಟರೆ ಈತನು ತನ್ನ ಜೀವನವನ್ನು ವ್ಯರ್ಥಗೊಳಿಸುವನು. ಅದಿರಲಿ. ಈ ಲೆಖ್ಖ ಪತ್ರವನ್ನು ನೋಡು. ಇದರಂತೆಯೇ ಸಾಮಾನುಗಳೂ ಅದಾಯವ್ಯಯಗಳೂ ಸರಿಯಾಗಿರುವುದೇ ಎನ್ನಲು ಆಕೆಯು ಎಲ್ಲವನ್ನೂ ಪರಿಶೀಲಿಸಿ ಸರಿಯಾಗಿದೆ ಎಂದಳು. ವಕೀಲನು ತಾನು ಮಾಡಬೇಕಾದ ಕಾರ್ಯವು ಇಲ್ಲಿಗೆ ಪೂರೈಸಿತು. ಇನ್ನು ಮುಂದೆ ಶಾಮಣ್ಣನು ದಾರಿಗೆ ಬಂದರೆ ಅವನೇ ಬುದ್ಧಿವಂತನಾಗುವನು. ಇಲ್ಲವೇ ಹಾಳಾಗುವನು. ಎಂದು ಚಿಂತಿಸಿ ತನ್ನ ಇತರೆ ಕಾರ್ಯಗಳ ಸಲುವಾಗಿ ಅಂಗಡಿಯಿಂದ ಹೊರಹೊರಟರು.

ಆನಂದವೇ ಆನಂದ! ಮಿತ್ರರ ಆನಂದವು ಅಪಾರವಾಯಿತು! ಶಾಮಣ್ಣನು ಇಂದು ಇಂತಹ ಭಾರೀ ಕಂಪೆನಿಗೆ ಯಜಮಾನನಾದಮೇಲೆ ಅವನ ಆನಂದಕ್ಕೆ ಮಿತಿಯಿರುವುದೇ? ಶಂಕರರಾಯನು ತನ್ನ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟಿರುವನೆಂದು ತಿಳಿಯಬಂದಮೇಲೆ ಶಾಮಣ್ಣನು ಆ ಅವಿಕಾಗ್ರೇಸರರಾದ ಕಿಟ್ಟಪುಟ್ಟರನ್ನು ಮ್ಯಾನೇಜರ್ ಪದವಿಗೆ ಸೇರಿಸಿದನು ಅಂತೂ ಒಬ್ಬನಿಗೆ ಇಬ್ಬರು ಮ್ಯಾನೇಜರುಗಳಾದರು. ಸುಗುಣೆಯೂ ಈ ಹುಚ್ಚು ದರ್ಬಾರನ್ನು ಕಂಡು ಕಡುನೊಂದಳು.

ಅಂದು ರಾಮುಲಾಲನು ಶಂಕರರಾಯನ ಪ್ರೇರಣೆಯಂತೆ ಹಿಂದೆ ತಾನು ಅನೇಕ ಅಂಗಡಿಯ ಸಹಾಯಕರಿಗೆ ಬರೆದು ಹಾಕಿದ್ದ ಕಾಗದಪತ್ರಗಳಿಗೆ ಜವಾಬು ಬರುವುದನ್ನೇ ಎದುರುನೋಡುತ್ತಿದ್ದನು. ಮಧ್ಯಾಹ್ನ ೨ ಘಂಟೆಗೆ ಅಂದಿನ ಟಪಾಲು ಬಂತು ಸರ್ವವೂ ಅಸಿಸ್ಟೆಂಟು ಮ್ಯಾನೇಜರ್ ಬಳಿಗೆ ಬರುತ್ತಿತ್ತು. ಇಂದೂ ಅದೇ ರೀತಿ ಅಂಚೆಯವನು ಎಲ್ಲವನ್ನೂ ರಾಮುಲಾಲಿನ ಮೇಜಿನ ಮೇಲೆ ಇಟ್ಟು ಹೊರಟುಹೋದನು.

ರಾಮುಲಾಲನು ಒಂದೊಂದಾಗಿ ಬಿಚ್ಚಿ ಓದಿದನು. ಎಲ್ಲ (ಇತರ ಕಂಪೆನಿಯವರೂ) ರೂ ಶಂಕರರಾಯನಿಗೆ ಮೊದಲಿನಿಂದಲೂ ಬೇಕಾದವರಾಗಿದ್ದರು, ಅಲ್ಲದೆ ತಮ್ಮ ಸರಕುಗಳನ್ನು ಕಳಿಸಿದರೆ ತಮ್ಮ ಗಂಟಿಗೇ ಮೋಸಬರುವುದೋ ಏನೋ ಎಂದು ಭಯ. ಮೇಲಾಗಿ ಚತುರನಾದ ಶಂಕರರಾಯನೂ ಅಂಗಡಿಯ ಮೇಲ್ವಿಚಾರಣೆಯನ್ನು ಬಿಟ್ಟಿರುವನಾದ್ದರಿಂದ ನಾವು ಗಂಟನ್ನೇತಕ್ಕೆ ಕಳೆದುಕೊಳ್ಳೋಣವೆಂದು ತಿಳಿದು ಶಂಕರರಾಯನ ಕಪಟವನ್ನರಿಯದೆ ಸಾಮಾನುಗಳನ್ನು ಕಳಿಸುವುದಿಲ್ಲವೆಂದು ಬರೆದಿದ್ದರು. ಇದೇ ರೀತಿ ನೋಡುತ್ತಾ ಬರಲು ಬ್ಯಾಂಕಿನಿಂದ ಬಂದ ಪತ್ರವನ್ನು ನೋಡಿದನು. ಅದೂ ಕೂಡ ಅವಿವೇಕಿಯಾದ

ಶಾಮಣ್ಣನಿಗೆ ನಾವು ಸಹಾಯ ಮಾಡುವುದಿಲ್ಲವು. ನಮ್ಮ ಬ್ಯಾಂಕಿನಿಂದ ಹಣ ಪಡೆದ ೨೦ ಲಕ್ಷ ರೂ.ಗಳನ್ನು ೮ ತಿಂಗಳೊಳಗಾಗಿ ಹಾಳುಮಾಡಿರುವನಾದ್ದರಿಂದ ಆತನ ಕಂಪೆನಿಗೆ ಮುಂದೇನೂ ಸಾಲಸೋಲ ದೊರೆಯಲಾರದು ಎಂದು ಶಂಕರರಾಯನಿಗೆ ಬರೆದಿದ್ದರು. ಇದೆಲ್ಲವನ್ನೂ ನೋಡಿ ರಾಮಲಾಲನು ಅತಿ ಸಂತೋಷದಿಂದ ಆ ಗುಟ್ಟಿನ ಕಾಗದಗಳನ್ನೆಲ್ಲಾ ತನ್ನ ಜೇಬಿನಲ್ಲಿಟ್ಟುಕೊಂಡು ಸಂಜೆಗೆ ಶಂಕರರಾಯನನ್ನು ನೋಡುವ ಸಲುವಾಗಿ ಆತುರದಿಂದ ಕಾದಿದ್ದನು.

ಇತ್ತ ಶಂಕರರಾಯನು ಮನೆಯಲ್ಲೇ ಇದ್ದು ಸರಳೆಯೊಂದಿಗೆ ಅವಳ ಅಕ್ಕ (ಸುಗುಣೆ) ನ ವಿಷಯಗಳನ್ನೆಲ್ಲಾ ಹೇಳುತ್ತಿದ್ದನು. ಅಷ್ಟುಹೊತ್ತಿಗೆ ಸರಿಯಾಗಿ ರಾಮಲಾಲನು ಬಂದನು. ಸರಳಾ, ನೀನು ಒಳಗೆ ಹೋಗು ಎಂದು ಅವಳನ್ನು ಕಳುಹಿಸಿ ಕೋಣೆಯ ಬಾಗಿಲನ್ನು ಹಾಕಿದನು. ತರುವಾಯ ರಾಮಲಾಲನು ಅಂದಿನ ಟಪಾಲಿನ ವಿಷಯವನ್ನೆಲ್ಲಾ ಬಾಯಿಂದ ಹೇಳಿ ಆ ಕಾಗದಗಳನ್ನು ತೋರಿಸಿದನು. ಅವುಗಳನ್ನೆಲ್ಲಾ ಚೆನ್ನಾಗಿ ಓದಿ ಒಂದೊಂದಾಗಿ ಮೇಜಿನಮೇಲೆ ಇಡುತ್ತಾ ಬಂದನು.

ಸರಳೆಯು ಸಾಧಾರಣ ಹೆಂಗಸಲ್ಲ. ಬಹು ಚತುರಳು ತನ್ನ ಭಾವನಾದ ಶಂಕರರಾಯನು ಇಂದೇಕೆ ಅಂಗಡಿಗೆ ಹೋಗಲಿಲ್ಲವೆಂದು ಊಹಿಸಿದಳು. ಸಂಶಯವಾಯಿತು. ಮೇಲಾಗಿ ಎಂದೂ ಬಾರದ ಈ ರಾಮಲಾಲನು ಇಂದೇಕೆ ಅಂಗಡಿಯಿಂದ ಇಷ್ಟು ಜಾಗ್ರತೆ ಬಂದಿರುವನು. ಸಂಶಯದಮೇಲೆ ಸಂಶಯ. ಇರಲಿ. ಇದರ ನಿಜಾಂಶವನ್ನು ತಿಳಿಯಲೇಬೇಕೆಂದು ಮರೆಯಾಗಿ ಇವರ ಸಂಭಾಷಣೆಯನ್ನು ಕೇಳಿಸಿಕೊಳ್ಳುತ್ತಿದ್ದಳು.

ಶಂಕರರಾಯನಿಗೆ ಹೇಗಾದರೂ ಮಾಡಿ ಶಾಮಣ್ಣನ ವ್ಯಾಪಾರವನ್ನು ಕೆಡಿಸಲೇಬೇಕೆಂಬ ಹಠವು ಅತಿಯಾಗಿತ್ತು. ಆದ್ದರಿಂದ ರಾಮಲಾಲನನ್ನು ಕುರಿತು, ರಾಮಲಾಲ, ಬಹು ಗುಟ್ಟಾಗಿ ಮಾಡಬೇಕಾದ ಕಾರ್ಯವೊಂದು ನಿನ್ನದಾಗಿದೆ. ಆ ಕೆಲಸವು ಕೈಗೂಡಿದರೆ ನಮ್ಮ ಐಶ್ವರ್ಯಕ್ಕೆ ಮಿತಿಯೇ ಇಲ್ಲದಂತಾಗುವುದು. ಆಗ ನಮ್ಮ ಸ್ಥಿತಿಯೇ ಬೇರೆಯಾಗುವುದು. ನಿನ್ನಲ್ಲಿ ಮುಚ್ಚುಮರೆಯೇಕೆ. ಹೇಗಾದರೂ ಮಾಡಿ ನೀನು ಶಾಮಣ್ಣನೊಡನೆ ಸ್ನೇಹ ಬೆಳೆಸಿ, ಅವನನ್ನು ಹಾಳುಮಾಡಿದರೆ ನಾವಿಬ್ಬರೂ ಮುಂದೆ ಈಗಿರುವ ಭಾರೀ ಅಂಗಡಿಗೆ ಯಜಮಾನರಾಗುವೆವು. ಇದು ಎಂತಹ ಉಪಾಯ. ಇದರಲ್ಲಿ ನಿನ್ನ ಅಭಿಪ್ರಾಯವೇನು ?

ರಾಮಲಾಲ—(ಶಂಕರರಾಯನ ಮಾತು ಬಹು ರುಚಿಯಾಗಿದ್ದರೀತಿ ಕಂಡುಬಂದದ್ದರಿಂದ) ಶಂಕರರಾವ್ ನಿನ್ನ ಮಾತಿಗೆ ಪ್ರತಿ ಎಂದಾದರೂ ಹೇಳುವೆನೇ. ನಿನ್ನ ಆಲೋಚನೆಯೇ ನನ್ನದು. ಎಂದು ಇಬ್ಬರೂ ಕೈಮುಟ್ಟಿಪ್ರತಿಜ್ಞೆಮಾಡಿ

ದರು. ಅಂತೂ ಈ ಅಂಗಡಿಯ ಯಜಮಾನ್ಯವೆಂಬ ವೃಕ್ಷದ ಫಲವನ್ನನುಭವಿಸಲಿಕ್ಕಾಗಿ ಬೀಜವನ್ನೇನೋ ಇಬ್ಬರೂ ಒಂದಾಗಿ ತಮ್ಮ ಕರ್ಮವೆಂಬ ಭೂಮಿಯಲ್ಲಿ ಬಿತ್ತಿದರು.

ಪಾತಕಮುಹಾಶಯಾ! ಬೀಜಕ್ಕೆ ತಕ್ಕಂಥ ಫಲವೇ ದೊರೆಯುವುದಲ್ಲದೆ ಬೇರೆ ದೊರತೀತೇ? ಈ ಬೀಜವಾದರೋ ವಿಷಬೀಜ. ಅದಕ್ಕೆ ತಕ್ಕ ಫಲವನ್ನು ಹೊಂದುವುದರಲ್ಲೇನು ತಾನೇ ಸಂಶಯ? ಅದು ಹಾಗಿರಲಿ.

ಇತ್ತ ಮುಂದಿನ ಕಾರ್ಯಕಲಾಪಗಳಿಗಾಗಿ ಶಂಕರರಾಯನು ರಾಮುಲಾಲ, ಇಂದುರಾತ್ರಿಯೊಳಗಾಗಿ ಒಬ್ಬ ನಂಬಿಕೆಯಾದ ಮುದ್ರಣಾಲಯದ (Printing Press) ಯಜಮಾನನನ್ನು ಹಿಡಿ. ಅವನಿಗೆ ವಿಶೇಷವಾದ ಹಣವನ್ನು ಕೊಟ್ಟು ನಾನು ಮುಂದೆ ಹೇಳುವ ರೀತಿ ಬರೆದುಕೊಂಡು ಅದರಂತೆ ಅನೇಕ ನೋಟೀಸ್ (Hand Bills) ಗಳನ್ನು ಮುದ್ರಿಸಿ ಅಲ್ಲಲ್ಲಿ ಕಂಬಗಳ ಮೇಲೆ ಮತ್ತು ಅಂಗಡಿಯ ಬಾಗಿಲಿಗೂ, ಅಂಟಿಸು. ಎಂದು ಅದರ ಒಕ್ಕಣೆಯನ್ನು ಹೇಳಿದನು. "ನಮ್ಮ ಅಂಗಡಿಗೆ ಹೊಸ ಸರಕುಗಳು ವಿಶೇಷವಾಗಿ ಬರುತ್ತಿರುವುದರಿಂದ, ಜನಗಳ ಉಪಯೋಗಕ್ಕಾಗಿಯೂ,ಅಲ್ಲದೆ ಕ್ರಿಸ್‌ಮಿಸ್ ಹಬ್ಬದ ಸಲುವಾಗಿಯೂ, ಶೇಕಡಾ ೫೦ ರಂತೆ (ಅಂದರೆ ಅರ್ಧ ಬೆಲೆಗೆ) ಎಲ್ಲಾ ಸಾಮಾನುಗಳನ್ನು ಮಾರಲಾಗುತ್ತೆ. ಒಂದಾವರ್ತಿ ಪರೀಕ್ಷಿಸಿ. [Grand Reduction Sale for X'mas)

ಈರೀತಿ ಬರೆದುಕೊಂಡಮೇಲೆ ರಾಮುಲಾಲನು ಹೊರಡಲುದ್ಯುಕ್ತನಾದನು ಅಷ್ಟರಲ್ಲಿ ಶಂಕರರಾಯನೂ, ಮೇಜಿನಮೇಲೆಯೇ ಕಾಗದಪತ್ರಗಳನ್ನು ಬಿಟ್ಟು ಅತನೊಡನೆ ಅಂದು ರಾತ್ರಿ ತಾನು ಬೊಂಬಾಯಿಗೆ ಹೊರಡುವ ಉದ್ದಿಶ್ಯವನ್ನು ತಿಳಿಸುವ ಸಲುವಾಗಿ ರಾಮುಲಾಲನೊಡನೆ ಮಾತಾಡುತ್ತಾ ಬಂದನು. ಇತ್ತ ಸರಳೆಯು ಇದೇ ಸಮಯವೆಂದರಿತು ತನಗೆ ಕೈಗೆ ಸಿಕ್ಕಿದ ಒಂದೆರಡು ಕಾಗದ ಪತ್ರಗಳನ್ನು ತೆಗೆದುಕೊಂಡು ಓದಲುದ್ಯುಕ್ತಳಾದಳು. ಅಷ್ಟರಲ್ಲಿ ರಾಮುಲಾಲನಿಗೆ ತನ್ನ ಮುಂಬಯಿನ ಅಡ್ರೆಸ್ಸನ್ನು ಕೊಟ್ಟು ಮುಂದಿನ ವಿಷಯಗಳನ್ನು ಅಂಚೆಯ ಮೂಲಕ ತಿಳಿಸುವಂತೆ ಹೇಳಿ, ಶಂಕರರಾಯನು ಒಳಗೆ ಬರುತ್ತಿದ್ದನು ಸರಳೆಯು ತನಗೆ ಬೇಕಾದ ಒಂದೆರಡು ಪತ್ರಗಳನ್ನು ತೆಗೆದುಕೊಂಡು ಹಾಗೆಯೇ ಮರೆಯಾದಳು.

ಇತ್ತ ಶಂಕರರಾಯನು ತನ್ನ ಕೆಲಸವು ಸಂಪೂರ್ಣವಾಯ್ತೆಂದೇ ತಿಳಿದು ಮದೋನ್ಮತ್ತನಾಗಿ ತನ್ನ ಕೊಠಡಿಯೊಳಗೆ ಬಂದು ಕೂತನು. ಹಾಗೆಯೇ ಮೇಜಿನಮೇಲಿದ್ದ ಪತ್ರಗಳನ್ನು ಭದ್ರಪಡಿಸಿದನು.

ರಾಮುಲಾಲನು ಹುನೆಗೆ ಬರುತ್ತಾ ದಾರಿಯಲ್ಲಿ ಮುದ್ರಣಾಲಯಕ್ಕೆ ಹೋಗಿ

ಶಂಕರರಾಯನ ಇಷ್ಟಪ್ರಕಾರ ಸರ್ವವನ್ನೂ ಸಿದ್ಧಪಡಿಸಿಕೊಂಡು ಅಂದು ರಾತ್ರಿ ೧೨ ಘಂಟೆಯೊಳಗಾಗಿ ಎಲ್ಲ ಕಾರ್ಯವನ್ನೂ ಪೂರೈಸಿದನು.

ಸುಗುಣೆಯು ಮನೆಗೆ ಬಂದಮೇಲೆ ಶಂಕರರಾಯನು ರಾತ್ರಿ ಊಟವನ್ನು ಪೂರೈಸಿಕೊಂಡು ಸುಗುಣೆಗೇನೊಂದು ವಿಷಯುವನ್ನೂ ತಿಳಿಸದೆ ಮನೆಯಿಂದ ಹೊರಟು ರೈಲಿನಲ್ಲಿ ಕೂತು ಮುಂಬಯಿಗೆ ಹೊರಟೇಹೋರಟನು.

ಸುಗುಣೆಯು ತನ್ನ ತಂಗಿಯಾದ ಸರಳೆಯನ್ನು ಕರೆದು, ಸರಳಾ, ಇಂದು ನಿಮ್ಮ ಭಾವನವರು ನನ್ನ ಮೇಲೆ ಕೋಪಮಾಡಿಕೊಂಡು ಊರಿಗೆ ಹೊರಟೇ ಹೋದರು ನನ್ನೊಡನೆ ಒಂದು ಮಾತನ್ನೂ ಆಡಲೇ ಇಲ್ಲ. ನಿನ್ನೊಡನೆ ಏನಾದರೂ ವಿಷಯುವನ್ನು ತಿಳಿಸಿದ್ದರೆ ಹೇಳು ಎಂದು ಕಣ್ಣೀರುಹಾಕತೊಡಗಿದಳು ಸರಳೆಯು ಅಕ್ಕಾ! ನನ್ನೊಡನೆ ಮುಂಬಯಿಗೆ ಹೋಗುತ್ತೇನೆಂದು ಹೇಳಿದ್ದರು. ಅಷ್ಟೇ ವಿನಹ ಮತ್ಯಾವ ಸಂಗತಿಯನ್ನೂ ಹೇಳಲಿಲ್ಲ. ಅದಿರಲಿ. ಭಾವನಿಗೇಕೆ ಇಂತಹ ಹುಚ್ಚು ಹಿಡಿಯಿತು. ಇಂದು ರಾಮುಲಾಲನೊಂದಿಗೆ ರಹಸ್ಯವಾಗಿ ಮಾ ತಾಡುತ್ತಿದ್ದರು, ಎಂದು ತನಗೆ ಅಲ್ಪಸ್ವಲ್ಪ ತಿಳಿದ ವಿಷಯುವನ್ನು ಹೇಳಿದಳು. ಮತ್ತು ಅಕ್ಕಾ ಇದೋ ಈ ೨-೩ ಕಾಗದಗಳು ನನಗೆ ಸಿಕ್ಕಿರುವುದು. ಎಂದು ತಾನು ತೆಗದಿದ್ದ ಕಾಗದಗಳನ್ನು ಕೊಟ್ಟಳು. ಸುಗುಣೆಯು ನೋಡಿ ಆಹಾ, ಇದಕ್ಕಾಗಿಯೇ ಅವರು ಮುಂಬಯಿಗೆ ಹೋಗಿರಬಹುದು. ಇದೇ ರೀತಿ ಮುಂಬ ಯಿನ ವರ್ತಕರಿಗೂ ಕೂಡ ನಮ್ಮ ಶಾಮಣ್ಣನಿಗೆ ಏನೊಂದು ಪದಾರ್ಥವನ್ನೂ ಕಳಿಸಿದಂತೆ ಏರ್ಪಾಡುಮಾಡಬಹುದು. ಇರಲಿ ನಾನು ಸತ್ಯಧರ್ಮಕ್ಕೆ ಹೊಡೆ ದಾಡುವೆನು. ಪತಿಯೆಂದು ಆತನ ದುಷ್ಕಾರ್ಯಗಳಿಗೆ ಎಂದಿಗೂ ನಾನು ಒತ್ತಾ ಸೆಕೊಡತಕ್ಕವಳಲ್ಲ. ಮೇಲಾಗಿ ಲೋಕಪತಿಯಾದ ಭಗವಂತನು ನನಗೂ ಪತಿಯು. ಆತನೇ ನನ್ನನ್ನು ಕಾಪಾಡುವನು. ಇರಲಿ. ಮುಂದಿನ ಯೋ ಚನೆಮಾಡುವೆನು. ಸರಳಾ! ಈಗ ನೀನು ಪ್ರಾಪ್ತ ವಯಸ್ಕಳಾಗಿರುವೆ. ನೀನೂ ಕೂಡ ನಿನ್ನ ಬುದ್ಧಿ ಚಾತುರ್ಯದಿಂದ ಶಾಮಣ್ಣನನ್ನು ದಾರಿಗೆ ತರ ಬೇಕು. ಆತನಿಗೇ ನಿನ್ನನ್ನು ಕೊಟ್ಟು ಲಗ್ನಮಾಡಬೇಕೆಂಬ ನನ್ನ ಮನೋ ರಥವನ್ನು ಸಾರ್ಥಕಗೊಳಿಸು ಆತನ ತಂದೆಯ ಉಪಕಾರವನ್ನು ಗೌರವಿಸು ಎನ್ನಲು, ಸರಳೆಯು ಅಕ್ಕಾ ನೀನು ಇದಕ್ಕಾಗಿ ಚಿಂತಿಸಬೇಡ. ನನ್ನ ಅಂತ ರಂಗದಲ್ಲಾಗಲೇ ಆತನನ್ನು ನನ್ನ ಪತಿಯೆಂದು ಭಾವಿಸಿರುವೆನು. ಆತನನ್ನು ನಾನೂ ಪ್ರಯತ್ನಪಟ್ಟು ಸನ್ಮಾರ್ಗಕ್ಕೆ ತರುವೆನು ಎಂದು ಸಮಾಧಾನ ಹೇಳಿ ದಳು. ಈರ್ವರೂ ರಾತ್ರಿ ಬಹಳ ಹೊತ್ತಾಯಿತೆಂದು ಮಲಗಿದರು.

ಪ್ರಾತಃಕಾಲವಾಗಲು ಸುಗುಣೆಯು ಅಂಗಡಿಗೆ ಹೊರಡಲುದ್ಯುಕ್ತಳಾದಳು. ಅಂಗಡಿಯ ಬಾಗಿಲಿಗೆ ಹಚ್ಚಿದ್ದ ಹಸ್ತಪತ್ರಿಕೆಗಳನ್ನು ನೋಡಿ ಜನರು ಅಗಲೇ

ಕಿಕ್ಕಿರಿದು ನಿಂತಿದ್ದಾರೆ. ಅಂಗಡಿಯ ಬಾಗಿಲನ್ನು ತೆಗೆದರೆ ಸಾಕು ಅರ್ಧಕ್ಕಿಂತ ಕಡಿಮೆ ಬೆಲೆಗೆ ಸಾಮಾನುಗಳನ್ನು ಮಾರುತ್ತಾರಾದ್ದರಿಂದ ನಾನು ಮೊದಲು ತೆಗೆದುಕೊಳ್ಳಬೇಕು, ತಾನು ಮೊದಲು ತೆಗೆದುಕೊಳ್ಳಬೇಕು (ಇಲ್ಲದಿದ್ದರೆ ಸಾಮಾನು ಎಲ್ಲಿ ಮುಗಿದುಹೋಗುವುದೋ ಎಂಬ ಸಂಶಯ) ಎಂದು ಅನೇಕರು ಆಗಲೇ ಕಾದಿದ್ದಾರೆ. ಅಂಗಡಿಯ ಸೇವಕರು ಬಾಗಿಲನ್ನು ತೆಗೆಯಲೂ ಬಿಡರು. ಸಂದಿಗಳಲ್ಲಿ ನುಗ್ಗಿ ಸೇವಕರು ಬಾಗಿಲನ್ನು ತೆಗೆದರು. ಎಂದೂ ಇಲ್ಲದ ಇಂತಹ ಪ್ರಚಂಡ ಗಲಾಟೆಯನ್ನು ಮಾರಾಟದ ಸ್ತ್ರೀಯರು ನೋಡಿ, ಇದೇನು ಈಸಾರ್ತಿ "ಕ್ರಿಸ್‌ಮಸ್ ಗ್ರ್ಯಾಂಡ್ ಸೇಲ್" ಗೆ ಇಷ್ಟು ಗಲಾಟೆ ಎಂದು ಸೋಜಿಗಗೊಂಡರು. ಆ ಸಾಮಾನು ಕೊಡಿ—ಈ ಸಾಮಾನು ಕೊಡಿ ಎಂದು ಎಲ್ಲರೂ ತೆಗೆದುಕೊಳ್ಳಹತ್ತಿದರು ಪಾಪ ! ಆ ಮಾರಾಟದ ಹೆಂಗಸರು ಅಂಗಡಿಯೊಳಕ್ಕೆ ಬರುವುದಕ್ಕೇ ಸ್ಥಳವಿಲ್ಲದಿದ್ದಾಗ ಅಂಗಡಿಯ ಬಾಗಿಲಿಗೆ ಹಚ್ಚಿದ್ದ ಪ್ರಸಿದ್ಧ ಪತ್ರಿಕೆಯನ್ನು ಹೇಗೆ ತಾನೇ ನೋಡುವರು ಅಂತೂ ತಮ್ಮ ನಿಜವಾದ ಬೆಲೆಯನ್ನೇ ಜನರಿಗೆ ತಿಳಿಸಿದರು. ಎಲ್ಲರೂ ಒಟ್ಟಾಗಿ, ಇದೇನು ? ನೀವು ಪ್ರಕಟಿಸಿರುವದು ಒಂದುರೀತಿ, ಮಾರುವುದು ಒಂದುರೀತಿ, ನೋಡಿ, ಎಂದು ಪ್ರಸಿದ್ಧ ಪತ್ರಿಕೆಗಳನ್ನು ತೋರಿಸಿದರು. ಸ್ತ್ರೀಯರಿಗೆ ಒಂದೂ ತಿಳಿಯದೆ ಹಾಗೆಯೇ ಯೋಚಿಸಿ ನಮ್ಮ ಧಣಿಯೇನಾದರೂ ಈರೀತಿ ಹಬ್ಬಕ್ಕಾಗಿ ಬೆಲೆಯನ್ನು ಕಮ್ಮಿ ಮಾಡಿರಬಹುದೆ ? ಎಂದು ಊಹಿಸಿ ಅದೇ ಅರ್ಧಕ್ರಯಕ್ಕೆ ಮಾರತೊಡಗಿದರು.

ಇಷ್ಟುಹೊತ್ತಿಗೆ ಸುಗುಣೆಯು ಮನೆಯಿಂದ ಹೊರಟು ಅಂಗಡಿಗೆ ಬಂದಳು. ಇತ್ತ ಶಾಮಣ್ಣನೂ ತನ್ನ ಪ್ರಿಯಸಖರೊಡನೆ ಅಂಗಡಿಯ ಬಾಗಿಲಿಗೆ ಬಂದನು. ಕಕ್ಕಾಬಿಕ್ಕಿಯಾಗಿ ಗಿರಾಕಿಗಳನ್ನು ನೋಡುತ್ತಾ ನಿಂತೇಬಿಟ್ಟನು. ಒಳಹೋಗಲು ದಾರಿಯೇ ಇಲ್ಲ. ಪುಟ್ಟಾ, ಇಂದೇನು ಇಷ್ಟು ಜನ ? ನೋಡಿದೆಯಾ! ನಾನು ಅಂಗಡಿಯ ಯಜಮಾನನಾದ ಕೂಡ್ಲೇ ಎಷ್ಟೊಂದು ಗಿರಾಕಿಗಳು, ನನ್ನ ಅದೃಷ್ಟ ಬಹಳ ಚೆನ್ನಾಗಿದೆ. ಇರಲಿ, ಒಳಗೆ ಹೋಗೋಣ. ಕಿಟ್ಟ, ನೀನು ಮುಂದೆ ದಾರಿ ಬಿಡಿಸುತ್ತಾ ನಡಿ ಎಂದು ಹೇಳುತ್ತಾ ಎಲ್ಲರೂ ಒಳಹೊಕ್ಕರು. ಮೂವರೂ ಆಫೀಸ್ ರೂಂನಲ್ಲಿ ಕೂತರು.

ಇತ್ತ ಮಧ್ಯಾಹ್ನವಾಗುತ್ತಾ ಬರಲು ಸ್ವಲ್ಪಮಟ್ಟಿಗೆ ಜನಗಳ ಗದ್ದಲವು ಕಡಿಮೆಯಾಯಿತು. ಮಾರಾಟದ ಹೆಂಗಸರ ಕೈಗಳೆಲ್ಲವೂ ಸೋತುಹೋಗಿದ್ದವು. ಅಂದು ಅಂಗಡಿಯ ಕೆಲಸಗಾರರಿಗೆಲ್ಲಾ ದಿಗ್ಭ್ರಮೆಯಾಯಿತು. ಎಲ್ಲರೂ ಒಟ್ಟಾಗಿ ಬಂದು ಸುಗುಣೆಗೆ ಈ ವರ್ತಮಾನವನ್ನು ತಿಳಿಸಿದರು. ಸುಗುಣೆಯು ಗಾಬರಿಗೊಂಡು ಹೊರಗೆ ಬಂದು ಅಂಗಡಿಗೆ ಹಚ್ಚಿದ್ದ ಚೀಟಿಯನ್ನು ನೋಡಿದಳು. ಮೈ ಜುಮ್ಮೆನಿಸಿತು. ಏನು ಮಾಡಿಯಾಳು ? ಶಾಮಣ್ಣನನ್ನು

ನೋಡುವ ಸಲುವಾಗಿ ಅವನ ಕೋಣೆಗೆ ಬಂದಳು. ತ್ರಿಮೂರ್ತಿಗಳಂತೆ ಮೂವರೂ ಇದ್ದರು ಶಾಮಣ್ಣನನ್ನು ಈಚೆಗೆ ಬರುವಂತೆ ಸಂಜ್ಞೆ ಮಾಡಿದಳು. ತರುವಾಯ ಶಾಮಣ್ಣನಿಗೆ ಅಂದು ನಡೆದಿರುವ ಸರ್ವ ವಿಷಯವನ್ನೂ ತಿಳಿಸಿದಳು. ಆ ಅವಿವೇಕಿ ಶಾಮಣ್ಣನಿಗೆ ಅದೊಂದೂ ತಲೆಗೆ ಹತ್ತಲಿಲ್ಲ. ಹಿಗ್ಗಿದನು. ವ್ಯಾಪಾರವು ಅಂದು ಎಷ್ಟುಮಟ್ಟಿನದೆಂದು ಲೆಖ್ಖವನ್ನು ತೆಗೆಸಿನೋಡಿದನು. ಅಂದು ಐದು ಸಾವಿರ ರೂಪಾಯಿಗಳೆಂದು ಕಂಡು, ಎಲೈ ಸುಗುಣೆ, ಎಂದೂ ನಡೆಯದ ವ್ಯಾಪಾರವು ಇಂದು ಆಗಿರಲು ಇದಕ್ಕೇಕೆ ನಿನಗೆ ವ್ಯಸನ? ದಿನ ಒಂದಕ್ಕೆ ಐದು ಸಾವಿರವಾದರೆ ತಿಂಗಳಿಗೆಷ್ಟಾಯಿತು? ವರ್ಷಕ್ಕೆಷ್ಟಾಯಿತು? ಛೀ, ನಿನಗೆ ಇದರ ವಿಷಯವೇ ತಿಳಿಯದು. ನಿನ್ನ ಕೆಲಸಕೆ ಹೊರಡು. ಹೊತ್ತಾಯಿತು. ನಾನೂ ನನ್ನ ಸ್ನೇಹಿತರೊಂದಿಗೆ ಮನೆಗೆ ಹೊರಡುವೆನು ಎಂದು ಹೊರಟೇಬಿಟ್ಟನು.

ಅಯ್ಯೋ ಪಾಪ! ಹೆಂಗಸಾದ ಸುಗುಣೆಯ ದುಃಖವು ಅಪಾರವಾಯಿತು. ಇದು ಲಾಭ-ಇದು ನಷ್ಟವೆಂದು ತಿಳಿಸಿದರೂ ಬುದ್ಧಿಬಾರದ ಶಾಮಣ್ಣನ ಪರಿಣಾಮವು ಎಂತೋ ಎಂದು ಚಿಂತಿಸುತ್ತಾ ಮನೆಗೆ ಹೊರಟಳು.

ಈಚೀಚೆಗೆ ರಾಮಲಾಲನು ಶಾಮಣ್ಣನೊಡನೆ ವಿಶೇಷ ಸ್ನೇಹ ಬೆಳೆಸುತ್ತಿದನು. ರಾಮಲಾಲನು ಶಂಕರರಾಯನ ಮಾತಿನಂತೆಯೇ ಕಾರ್ಯ ಬೆಳೆಸತೊಡಗಿದನು. ಸುಂದರಿಯ ಮನೆಗೆ ಹೋಗುವುದೂ ಬರುವುದೂ ವಿಶೇಷವಾಯಿತು. ಮೂರ್ಖಾಗ್ರೇಸರನಾದ ಶಾಮಣ್ಣನು ಇದೊಂದನ್ನೂ ತಿಳಿಯಲೇ ಇಲ್ಲ. ರಾಮಲಾಲನೂ ಅಂದೇ ಶಂಕರರಾಯನಿಗೆ ವ್ಯಾಪಾರದ ನಷ್ಟವನ್ನು ಸೂಚಿಸುವ ಸಲುವಾಗಿಯೂ, ಮುಂದೆ ತಾನು ಮಾಡಬೇಕಾದ ಕಾರ್ಯವನ್ನು ತಿಳಿಯಲೋಸುಗವಾಗಿಯೂ ಒಂದು ಕಾಗದವನ್ನು ಬೊಂಬಾಯಿಗೆ ಬರೆದನು.

ಇತ್ತ ಸುಗುಣೆಯು ಮನೆಗೆ ಬಂದೊಡನೆಯೇ ತನಗಾಗಿ ಭೋಜನಕ್ಕೆ ಕಾದಿದ್ದ ತನ್ನ ಸಹೋದರಿ (ಸರಳೆ) ಯನ್ನು ಹಾಗೆಯೇ ಎವೆಯಿಕ್ಕದೆ ನೋಡುತ್ತಾ ನಿಂತುಬಿಟ್ಟಳು. ಸ್ವಲ್ಪ ಹೊತ್ತಾದ ಬಳಿಕ ಅಕ್ಕನ ಕಣ್ಣುಗಳಿಂದ ನೀರು ಬರುತ್ತಿದ್ದುದನ್ನು ಕಂಡು, ಬಾಲಕಿಯಾದ ಸರಳೆಯು ಅಕ್ಕನನ್ನು ಸಂತೈಸಿ ಮಾತಾಡತೊಡಗಿದಳು. ಅಕ್ಕಾ, ಇಂದೇಕೆ ನೀನು ಈ ರೀತಿ ಸಂತಾಪಿಸುತ್ತಲಿರುವೆ, ನಿನ್ನ ದುಃಖವಾದರೂ ಏನು? ಬೇಗ ತಿಳಿಸು.

ಸುಗುಣೆ—ಸಹೋದರಿ, ನನ್ನ ದುಃಖವು ವಿಶಿಷ್ಟವಾದುದು ನಮ್ಮ ವರ್ತಕ ಸಾಕುತಂದೆಯಾದ ಕೇಶವರಾಯರಿಗೆ, ತಾನು ಮಾಡಿದ ದಾನಗಳ್ದನವು ಬಂದು ಕಡೆಯಾಗುತ್ತಾ ಬಂತು ಇದಕ್ಕಾಗಿ ದುಃಖಿಸುತ್ತಿರುವೆ. ಅಲ್ಲದೆ ಶಾಮಣ್ಣನು ಆ ಸುಂದರಿಯ ಪಾಶಕ್ಕೆ ಸಿಕ್ಕಿ ಹಣವನ್ನು ಹಾಳು ಮಾಡುತ್ತಿರುವನು.

ಆತನು ದಾರಿಗೆ ಬರಲು ಸಾಧ್ಯವೇ? ಇಲ್ಲ! ಇಲ್ಲ! ಆತನ ಚಿತ್ತವೃತ್ತಿಯೇ ಬದಲಾಯಿಸಿದಂತಿದೆ. ಹಾಳು ಸಹವಾಸ ಎಂದು ರೋದಿಸತೊಡಗಿದಳು. ಸರಳೆಯು ಹಾಗೆಯೇ ಯೋಚಿಸಿ ಅಕ್ಕಾ, ಇದಕ್ಕೇಕೆ ಇಷ್ಟು ದುಃಖಪಡುವೆ. ನನ್ನಿಂದ ಸಹಾಯವನ್ನು ಹೊಂದಿ ಆತನನ್ನು ನೀನು ದಾರಿಗೆ ತರಲಾರೆಯಾ? ನಡಿ. ಈಗ ಊಟಮಾಡೋಣ ನಂತರ ಎಲ್ಲವೂ ಎಂದು ಈರ್ವರೂ ಊಟಮಾಡಲು ಹೊರಟರು.

ಭೋಜನಾನಂತರ ಸುಗುಣೆಯು, ಸರಳಾ, ನನಗೊಂದು ಆಲೋಚನೆಯು ಹೊಳೆಯುತ್ತಿದೆ. ನೀನು 'ಕಲಾಶಾಸ್ತ್ರ'ದಲ್ಲಿ ಪ್ರವೀಣಳಿದ್ದೀಯೆ. ಆದ್ದರಿಂದ ಇಂದು ಮಧ್ಯಾಹ್ನವೇ ಶ್ಯಾಮಣ್ಣನ ಚಿತ್ರಪಟವೊಂದನ್ನು ಬರಿ. ಆತನನ್ನು ನೀನು ನೋಡಿರುವಿ. ಇದರಿಂದ ಏನಾಯಿತೆಂದರೆ ಆತನ ಮನವನ್ನಾಕರ್ಷಿಸಿದಂತಾಗಿ ಕೊನೆಕೊನೆಗೆ ನಿನ್ನ ಮೇಲೆ ಪ್ರೀತಿಯು ಹೆಚ್ಚಾಗಿ, ಸುಂದರಿಯ ಆಶೆಯನ್ನು ಬಿಡಬಹುದು. ನಿನ್ನ ಬುದ್ಧಿಕುಶಲತೆಯನ್ನು ನೋಡುವೆ. ಇಂದು ಸಾಯಂಕಾಲ ಚಿತ್ರಪಟದೊಂದಿಗೆ ಅಂಗಡಿಗೆ ಬಾ ಎಂದು ಹೇಳಿ ಸುಗುಣೆಯು ಅಂಗಡಿಗೆ ಹೊರಟಳು.

ಒಂದು ರೂಪಾಯಿನ ಪದಾರ್ಥವನ್ನು ಎಂಟಾಣೆಗೆ ಕೊಡುವುದಾದರೆ ಯಾರು ತಾನೆ ತೆಗೆದುಕೊಳ್ಳಲಾರರು! ಅಂತೆಯೇ ನಮ್ಮ ಶಾಮರಾಯನ ಅಂಗಡಿಯ ಸಾಮಾನುಗಳ ಖರೀದಿಯೂ ಪರರೋ ಹಾಗೆಯೇ ಆಗಿತ್ತು. ಸಾಲ ಸಿಕ್ಕುತ್ತದೆ ಈಗಲೇ ಬೇಕಾದಷ್ಟು ತೆಗೆದುಕೊಳ್ಳೋಣ, ಎಂದು ಕೆಲವರು, ನಗದು ಕೆಲವರು, ಈ ರೀತಿ ಅಂತೂ ಇಂತೂ ಐದಾರು ದಿವಸಗಳಲ್ಲಿ ಅಂಗಡಿಯು ಬರಿದಾಗುತ್ತ ಬಂತು. ಅಂಗಡಿಯಲ್ಲಿದ್ದ ಸರಕು ಖರ್ಚಾದಂತೆಲ್ಲಾ ಹೊರಗಿನಿಂದ ಹೊಸ ಸರಕು ಬರುತ್ತಿದ್ದರೆ ಅಂಗಡಿಯು ತುಂಬಿರುತ್ತದೆ. ಶಾಮಣ್ಣನ ಅಂಗಡಿಗೆ ಹೊಸ ಸರಕುಗಳು ಶಂಕರರಾಯನ ಕುತಂತ್ರದಿಂದ ಬಾರದೆಹೋದ್ದರಿಂದ ಅಂಗಡಿಯಲ್ಲಿದ್ದ ಸರಕಿನಲ್ಲಿ ಮುಕ್ಕಾಲು ಭಾಗ ಪೂರೈಸಿತು. ಕಾಲುಭಾಗ ಉಳಿದಿದೆ. ಒಂದೆರಡು ದಿನದಲ್ಲಿ ಅದೂ ಪೂರೈಸಿದಮೇಲೆ ಮಾಡುವುದು ತಾನೇ ಏನು ? ಇಂಥಾ ದೊಡ್ಡ ಯೋಚನೆಯು ಸುಗುಣೆಯೊಬ್ಬಳಿಗಲ್ಲದೆ ಮತ್ಯಾರಿಗೂ ಹೊಳೆಯಲೇ ಇಲ್ಲ. ಅಂದು ತನ್ನ ಕೊಠಡಿಯಲ್ಲಿ ಸುಗುಣೆಯು ಏನೊಂದು ಕಾರ್ಯವನ್ನೂ ಮಾಡದೆ ಹಾಗೆಯೇ ಸರಳೆಯ ಬರುವಿಕೆಯನ್ನೇ ಎದುರುನೋಡುತ್ತಾ ಕುಳಿತಿದ್ದಳು.

ಇತ್ತ ಸರಳೆಯು ಕಲಾಶಾಸ್ತ್ರನಿಪುಣಳಾದ್ದರಿಂದ ಎರಡು ಘಂಟೆಯ ಕಾಲದೊಳಗಾಗಿ ಶಾಮಣ್ಣನ ಸುಂದರ ಚಿತ್ರಪಟವೊಂದನ್ನು ಬರೆದು ಮುಗಿಸಿ, ಅಂಗಡಿಗೆ ಬಂದು ಅಕ್ಕನಿಗೆ ಚಿತ್ರಪಟವನ್ನು ಕೊಟ್ಟಳು. ಸುಗುಣೆಯು ಆಕೆಯ

ಅಮೋಘವಾದ ಕಲಾ ನೈಪುಣ್ಯಕ್ಕೆ ಮೆಚ್ಚಿ ಆನಂದಭರಿತಳಾಗಿ ಸರಳೆಯನ್ನು ಕೊಠಡಿಯಲ್ಲೇ ಕುಳಿತಿರುವಂತೆ ಹೇಳಿ ಚಿತ್ರಪಟದೊಂದಿಗೆ ಶ್ಯಾಮಣ್ಣನನ್ನು ನೋಡುವ ಸಲುವಾಗಿ ಆತನ ಕೊಠಡಿಗೆ ಬಂದಳು.

ಆನಂದಸಾಮ್ರಾಜ್ಯದಲ್ಲಿ ಮೈಮರೆತಿದ್ದ ಶಾಮಣ್ಣನಿಗೆ ಸುಗುಣೆಯು ಬಾಗಿಲಲ್ಲಿ ನಿಂತಿದ್ದರೂ ಕಾಣಿಸಲೇ ಇಲ್ಲ. ಕೊನೆಗೆ ಸುಗುಣೆಯೇ ಮುಂದೆ ಬಂದು ಶಾಮಣ್ಣನ ಭಾವಚಿತ್ರವನ್ನು ಮುಂದಿಟ್ಟಳು. ಶಾಮಣ್ಣನ ದೃಷ್ಟಿಯು ಹಾಗೆಯೇ ಆ ಭಾವಚಿತ್ರದ ಮೇಲೆ ಬಿತ್ತು. ಕಲಾಕೋವಿದರೇ ಸರಳೆಯು ನಿಪುಣಳೆಂದು ಬಹುಮಾನಸನ್ಮಾನಗಳನ್ನು ಮಾಡಿರುವಲ್ಲಿ ಶಾಮಣ್ಣ ಮತ್ತು ಅವನ ಅಪ್ರಯೋಜಕ ಸ್ನೇಹಿತರಂತಹ ಶುದ್ಧಶುಂಠರು ಆಶ್ಚರ್ಯಚಕಿತರಾಗುವುದು ಅಸಾಧ್ಯವೇ? ಶ್ಯಾಮಣ್ಣನು ದಿಗ್ಭ್ರಮೆಗೊಂಡು ಕುತೂಹಲದಿಂದ, ಸುಗುಣಾ! ಇಂತಹ ಸುಂದರಚಿತ್ರವನ್ನು ನನಗೆ ತಿಳಿಯದೆಯೂ ನನ್ನನ್ನು ನೋಡದೆಯೂ ಕೂಡ ಬರೆದಿರುವ ಕಲಾಕುಶಲರಾರೆಂಬುದನ್ನು ತಿಳಿಸು ಎಂದನು. ಸುಗುಣೆಯು ಶಾಮಣ್ಣ! ಇದನ್ನು ಓರ್ವ ಸುಂದರೀಮಣಿಯು ಬರೆದಿರುವಳು, ಆಕೆಯು ನಿನ್ನ ಸಂದರ್ಶನಾಪೇಕ್ಷೆಯಲ್ಲಿದ್ದಾಳೆ. ಬರುವುದಾದರೆ ಆಕೆಯನ್ನು ಇರುವ ಸ್ಥಳವನ್ನು ತಿಳಿಸುವೆನು ಎನ್ನಲು ಕೂಡ್ಲೇ ಶಾಮಣ್ಣನೂ ಅವನ ಸ್ನೇಹಿತರೂ ಸುಗುಣೆಯನ್ನು ಹಿಂಬಾಲಿಸಿ ಸರಳೆಯು ಇದ್ದ ಕೊಠಡಿಗೆ ಬಂದರು ಸರಳೆಯು ಶಾಮಣ್ಣನಿಗೆ ವಂದಿಸಿದಳು. ಶಾಮಣ್ಣನು ಸರಳೆಯನ್ನು ನೋಡಿ ಬಹಳ ದಿನಸಗಳಾಗಿತ್ತು. ಕೊಂಚಹೊತ್ತಾದ ಬಳಿಕ ಸರಳಾ! ನೀನು ಇಂಥಾ ಕಲಾಶಾಸ್ತ್ರಪಂಡಿತಳೆಂದು ತಿಳಿದಿರಲಿಲ್ಲ. ಒಳ್ಳೆಯದು. ಈಗ ನೀನು ಈ ಚಿತ್ರಪಟವನ್ನು ಬರೆದು ನನ್ನನ್ನು ಕಾಣಲು ಬಂದ ನಿಮಿತ್ತವೇನು? ಎನ್ನಲು, ಸರಳೆಯು ನಿಮಿತ್ತವು ಬಹಳವಾಗಿದೆ. ಆದರೆ ಏಕಾಂತವಾಗಿ ತಿಳಿಸಲು ನಿಮ್ಮ ಅಪ್ಪಣೆಯೇನೆಂದಳು. ಶಾಮಣ್ಣನು ತನ್ನ ಸ್ನೇಹಿತರನ್ನು ತನ್ನ ಕೊಠಡಿಯಲ್ಲಿರುವಂತೆ ಹೇಳಿ ಹೊರಕಳಿಸಿದನು. ಸುಗುಣೆಯೂ ಕೂಡ ತನ್ನ ಕೆಲಸವು ಕೊಂಚಮಟ್ಟಿಗೆ ಸಫಲವಾಯಿತೆಂದು ತಿಳಿದು ತನ್ನ ಕಾರ್ಯದಲ್ಲಿ ಉದ್ಯುಕ್ತಳಾದಳು.

ಇತ್ತ ರಾಮುಲಾಲನು ಸುಗುಣೆಯ ಮತ್ತು ಶಾಮಣ್ಣನ ಕಾರ್ಯಕಲಾಪಗಳಲ್ಲೆಲ್ಲಾ ಹೊಂಚುಹಾಕುತ್ತಿದ್ದನು. ಇಂದು ಸರಳೆಯೂ ಶಾಮಣ್ಣನೂ ಏಕಾಂತದಲ್ಲಿ ರಹಸ್ಯವಾಗಿ ಕುಳಿತು ಮಾತಾಡುತ್ತಿರುವುದನ್ನು ಕಣ್ಣಾರೆ ಕಂಡನು. ಥಟ್ಟನೆ ಒಂದು ಆಲೋಚನೆಯು ಹೊಳೆದು ಕೂಡ್ಲೆ ವರ್ತಮಾನಪ್ರಕಾಶಿಕೆಯ ಬಳಿ ಬಂದು ಸುಂದರಿಗೆ ತಕ್ಷಣ ಅಂಗಡಿಗೆ ಬರುವಂತೆ ತಿಳಿಸಿದನು.

ಸುಂದರಿಯು ಈಚೀಚೆಗೆ ರಾಮುಲಾಲನ ಪ್ರೀತಿ ಸಂಪಾದಿಸಿದ್ದಳಾದ್ದರಿಂದ

ಆವನ ಅನುಮತಿಯಂತೆಯೇ ಜಾಗ್ರತೆಯಾಗಿ ಮೋಟಾರಿನಲ್ಲಿ ಕುಳಿತು ಅಂಗಡಿಗೆ ಬಂದಳು.

ಸುಂದರಿಯೊಡನೆ ರಾಮಲಾಲನು ಸುಗುಣೆಗೆ ತಿಳಿಯದಂತೆ ಹಿಂಭಾಗದಿಂದ ಬಂದು ಶಾಮಣ್ಣನೂ ಸರಳೆಯೂ ಮಾತಾಡುತ್ತಿರುವುದನ್ನು ತೋರಿಸಿದನು. ಸ್ತ್ರೀಯರಿಗೆ ಎಷ್ಟೇ ನಂಬಿಕೆಯಿದ್ದರೂ ಬಹುಬೇಗ ಸಿಟ್ಟು ಬರುವ ಸ್ವಭಾವ. ಸುಂದರಿಗೆ ಅಘುಮಾನ ಬಂತು. ಕಣ್ಣುಗಳು ಕೆಂಪಾದವು. ಇದರಮೇಲೆ ರಾಮಲಾಲನ ಒತ್ತಾಸೆ. ಒಂದೇ ಸಮನೆ ಶಾಮಣ್ಣನನ್ನು ನುಂಗಿಬಿಡುವಷ್ಟು ಕೋಪವುಳ್ಳವಳಾಗಿ ಒಳಹೊಗಬೇಕೆಂದಿದ್ದಳು. ರಾಮಲಾಲನು ತಡೆದು ಅವರೀರ್ವರ ಸಂಭಾಷಣೆಯನ್ನು ಕೇಳಿಸಿಕೊಳ್ಳತೊಡಗಿದನು.

ಇತ್ತ ಶಾಮಣ್ಣನು ಸರಳೆಯು ಬಂದ ನಿಮಿತ್ತವೇನೆಂದು ಕೇಳಲು ಸರಳೆಯು ಹೇಳತೊಡಗಿದಳು.

ಸರಳೆ—ಸ್ವಾಮಿ! ತಾವು ನನ್ನ ಮನೋರಥವನ್ನು ಈಡೇರಿಸುವೆನೆಂದು ವಚನಕೊಟ್ಟರೆ ತಿಳಿಸುವೆನು. ಇಲ್ಲದಿದ್ದರೆ ಈಗಲೇ ಹೊರಡುವೆನು.

ಶಾಮಣ್ಣ—ಸರಳಾ! ಈ ನಿನ್ನ ಕಲಾಕೌಶಲ್ಯಕ್ಕೆ ಏನು ಕೊಟ್ಟರೂ ತೀರದು. (ಮನಸ್ಸಿನಲ್ಲಿ ಪಾಪ, ಇವಳೇನು ಕೇಳಿಯಾಳು. ಬೇಕಾದಷ್ಟು ಹಣ ಕೊಟ್ಟರಾಯಿತು ಎಂದು ತಿಳಿದು) ಆಗಲಿ ಇದೋ ನೀನು ಕೇಳಿದ್ದನ್ನು ಕೊಡುವೆನು ಎಂದು ವಚನವಿತ್ತನು. ನಿನ್ನ ಇಷ್ಟಪೂರ್ತಿ ಮಾಡುವೆನು.

ಸರಳೆ—ತಾವು ನಡೆಸುತ್ತಿರುವ ವ್ಯಾಪಾರದಲ್ಲಿ ವಿಶೇಷ ನಷ್ಟ ಉಂಟಾಗಿದೆ. ಹೇಗೆಂದರೆ, ಒಂದು ಪದಾರ್ಥದ ಬೆಲೆಯು ಒಂದು ರೂಪಾಯಿಯಾದರೆ ಅದನ್ನು ಅರ್ಧರೂಪಾಯಿಗೆ ಮಾರಿದರೆ ಲಾಭವೋ ನಷ್ಟವೋ ತಿಳಿಸಿ.

ಶ್ಯಾಮಣ್ಣ—ಇದೇನು ಹೀಗೆ ಕೇಳುವಿ. ಎಳೆಯ ಮಕ್ಕಳೂ ಕೂಡ ಅದು ನಷ್ಟವೆನ್ನುವರು.

ಸರಳೆ—ಹಾಗಾದರೆ ನೀವೂ ನಷ್ಟವನ್ನು ಹೊಂದಿರುವಿರಿ ತಾನೇ ?

ಶಾಮಣ್ಣ—ಅದು ಹೇಗೆ ? ದಿನ ಒಂದಕ್ಕೆ ೫ ಸಾವಿರ ರೂಪಾಯಿಗಳ ವ್ಯಾಪಾರ ಭಾರೀ ವ್ಯಾಪಾರವಲ್ಲವೇ?

ಸರಳೆ—ವ್ಯಾಪಾರವೇನೋ ಭಾರಿಯದೇ ಆದರೆ ಮಾರಿರುವ ೫ ಸಾವಿರ ರೂಪಾಯಿಗಳ ಸರಕು ಎಷ್ಟು ಬೆಲೆ ಬಾಳೀತೆಂಬುದನ್ನು ಬಲ್ಲಿರಾ ?

ಶ್ಯಾಮಣ್ಣ—ಏನು ಸರಕಿನ ಬೆಲೆಯೇ ? ಇಲ್ಲ ! ಇಲ್ಲ !!

ಸರಳೆ—ಹಾಗಾದರೆ ಸರಕಿನ ಅಸಲು ಕ್ರಯದಪಟ್ಟಿಪುಸ್ತಕವನ್ನು (stock book) ತರಿಸಿ ಎನ್ನಲು ಕೂಡ್ಲೇ ಜವಾನನೊಬ್ಬನನ್ನು ಕರೆದು, ಸುಗುಣೆಯನ್ನು ಆ ಪುಸ್ತಕದೊಡನೆ ಕರೆತರುವಂತೆ ತಿಳಿಸಿದನು.

ಕೂಡಲೆ ಸುಗುಣೆಯು ಪುಸ್ತಕವನ್ನು ತಂದು ಮುಂದಿಟ್ಟಳು. ಅಸಲು ಕ್ರಯವು ಮಾರಿರುವ ೫ ಸಾವಿರರೂಪಾಯಿಗಳ ಸರಕಿಗೆ ೧೦ ಸಾವಿರ ರೂಪಾಯಿ ಗಳಿದ್ದವು. ಇದರಿಂದ ಪ್ರತಿ ಹತ್ತುಸಾವಿರ ರೂಪಾಯಿಗಳಿಗೆ ಐದುಸಾವಿರ ರೂಪಾಯಿಗಳ ನಷ್ಟವೆಂಬುದನ್ನು ಸರಳೆಯು ತನ್ನ ಬುದ್ಧಿಶಕ್ತಿಯಿಂದ ಶಾಮು ಣ್ಣನ ಮನಸ್ಸಿಗೆ ಚನ್ನಾಗಿ ಬೇರೂರುವಂತೆ ಮಾಡಿದಳು.

ಪಾಪ! ಏನೂ ತಿಳಿಯದ ಶಾಮಣ್ಣನ ಎದೆಯೊಡೆಯಿತು. ದಿಕ್ಕು ತೋ ಚದಂತಾಯಿತು. ಹಣವನ್ನು ಹುಣಸೇಬೀಜಕ್ಕಿಂತಲೂ ಕಡೆಯಾಗೆಣಿಸಿದ್ದ ಶಾಮಣ್ಣನಿಗೆ ಹಣದ ಬೆಲೆಯು ಈಗಲೀಗ ತಿಳಿಯಬಂತು. ಇದರ ಮೇಲೆ ಅರ್ಧಕ್ಕರ್ಧ ಬೆಲೆಗೆ ಸರಕುಗಳು ಮಾರಾಟವಾಗಿ ನಷ್ಟಹೊಂದಿರುವೆನೆಂಬಂಶವು ತಿಳಿದಮೇಲೆ ತನ್ನ ಅವಿವೇಕಕ್ಕಾಗಿ ಚಿಂತಿಸಹತ್ತಿದನು. ಇದು ಹೇಗಾಯಿತೆಂಬ ವಿಷಯವನ್ನು ಸುಗುಣೆಯಿಂದ ಕೇಳಿ ತಿಳಿದನು. ಶಂಕರರಾಯನ ದೌಷ್ಟ್ಯಕ್ಕೂ ಕುತಂತ್ರಕ್ಕೂ ಕೋಪಹುಟ್ಟಿತು. ಸ್ವಲ್ಪಹೊತ್ತು ಮಾತಾಡದೆ ಸುಮ್ಮನಿದ್ದು ಸುಗುಣಾ! ನೀನು ನನಗೆ ಅನೇಕ ಸಂದರ್ಭಗಳಲ್ಲಿ 'ನನ್ನಿಂದ ತಿಳಿದುಕೋ' ಎಂದು ಹೇಳುತ್ತಿದ್ದೆ. ಅದಕ್ಕೆ ಗಮನ ಕೊಡಲಿಲ್ಲ. "ಅಟ್ಟ ಮೇಲೆ ಒಲೆ ಉರಿ ಯಿತು, ಕೆಟ್ಟ ಮೇಲೆ ಬುದ್ಧಿಬಂತು" ಎನ್ನುವಂತೆ ಈಗ ದುಃಖಿಸಿ ಫಲವೇನು? ಮುಂದೇನು ಮಾಡಬೇಕು. ಬೇಗ ತಿಳಿಸು ಎನ್ನುವಷ್ಟರಲ್ಲಿ, ಸುಂದರಿಯು ಬಾಗಿಲನ್ನು ತೆಗೆದು ಒಳಹೊಕ್ಕಳು.

ಶಾಮಣ್ಣನು ಸುಂದರಿಯನ್ನು ನೋಡಿದನು. ಸುಂದರಿಯು ಇಂದು ಶಾಂತಳಾಗಿರಲಿಲ್ಲ. ಕಡುಕೋಪದಿಂದ ಅವಳ ನಯನಗಳೆರಡೂ ಬೆಂಕಿಯ ಕೆಂಡ ಡಗಳನ್ನು ಕಾರುತ್ತಿದ್ದವು. ಕೊನೆಗೆ ಶಾಮಣ್ಣಾ, ನನ್ನನ್ನು ವಂಚಿಸಿ ಇವಳೊಡನೆ ಕುಳಿತು ಸಂಭಾಷಣೆ ಮಾಡುತ್ತಿರುವೆಯಾ ? ಅಲ್ಲದೆ ನಿನ್ನ ಅವಿವೇಕತನದಿಂ ದ ದುಂದುವೆಚ್ಚಮಾಡಿ ಈಗ ಪೆಚ್ಚುಮೋರೆ ಹಾಕಿಕೊಂಡಿರುವೆ. ಇಂದು ನನಗೆ ಮುತ್ತಿನ ಹಾರವನ್ನು ತಂದುಕೊಡುವೆನೆಂದು ಸುಳ್ಳು ಹೇಳಿ ಇಲ್ಲಿ ಈ ಸೊಗಸು ಗಾತಿಯೊಡನೆ ಸಂಭಾಷಣೆ ಮಾಡಲು ನಿನ್ನ ಮನಸ್ಸು ಹೇಗೆ ಒಪ್ಪಿತು.

ಈಗೇನುಹೇಳುವೆ, ಮುತ್ತಿನಹಾರವನ್ನು ಮೊದಲುಕೊಡು ಈ ಚೀಟಿಯ ಸಂಗ ಬಿಡುವುದಾದರೆ ನನ್ನ ಮನೆಗೆ ಬಾ, ಇಲ್ಲದಿದ್ದಲ್ಲಿ ನಿನ್ನ ದಾರಿ ನಿನ್ನದು. ಏನು ಹೇಳುವೆ.

ಶಾ—ಸುಂದರಿ ! ಇಂದೇಕೆ ಇಷ್ಟು ಕೋಪ ! ಈಕೆಯು ಸುಗುಣೆಯ ತಂಗಿಯು. ಹೆಸರು ಸರಳಕುಮಾರಿ. ನನ್ನ ಭಾವಚಿತ್ರವನ್ನು ಎಷ್ಟು ಸುಂದರ ವಾಗಿ ಬರೆದಿರುವಳು, ನೋಡು. ಎಂದು ಕೈಗೆ ಕೊಡಲು 'ಕೋತಿಯ ಕೈಗೆ ಮಾ ಣಿಕ್ಯ ಕೊಟ್ಟಂತೆ' ರೋಷಾನ್ವಿತಳಾಗಿ ಅದನ್ನು ಹರಿದು ಹಾಕಿದಳು. ಸರ

ಳಿಯ ಕೋಪವು ಅಧಿಕವಾಯ್ತು. ಅವಮಾನ ಬೇರೆ. ಆದರೆ ಗೌರವಕ್ಕಾಗಿ ಸುಮ್ಮನಾದಳು. ಶಾಮಣ್ಣನು ಯಾವ ಮಾತೂ ಆಡಲಿಲ್ಲ. ಕೊನೆಗೆ ಸುಂದರಿಯು ಲೋ, ಹೇಡಿ, ಶಾಮಣ್ಣ! ಇಂದು ರಾತ್ರಿ ಮುತ್ತಿನ ಹಾರವನ್ನು ತರದಿದ್ದರೆ ಪುನಃ ನಿನ್ನನ್ನು ನಾನು ನೋಡುವುದಿಲ್ಲವೆಂದು ಹೊರಟೇಹೋದಳು.

ರಾಮುಲಾಲನು ಸುಂದರಿಯನ್ನು ಹಿಂಬಾಲಿಸಲು ತಟ್ಟನೆ ಹೊರಗೆ ಬಂದನು. ಸರಳೆಯು ಮರೆಯಲ್ಲಿ ನಿಂತು ಅವರೀರ್ವರ ಸಂಭಾಷಣೆಯನ್ನು ಕೇಳಿಸಿಕೊಂಡಳು. ಕೊನೆಯಲ್ಲಿ ಹೇಗಾದರೂ........ಶಾಮಣ್ಣನನ್ನು..... ವಿಷ........ ಎಂಬ ಮಾತುಗಳು ಸ್ಪಷ್ಟವಾಗಿ ಗೊತ್ತಾಯ್ತು. ಸಂಶಯ ಬಂತು. ಸರಳೆಯು, ಮರಳಿ ಶಾಮಣ್ಣನ ಬಳಿಗೆ ಬಂದಳು. ಇತ್ತ ಸುಂದರಿಯು ಮನೆಗೆ ಹೊರಟಳು. ರಾಮುಲಾಲನು ಅಂದಿನ ಟಪಾಲನ್ನು ನೋಡಲು ತನ್ನ ಕಾರ್ಯದಲ್ಲುದ್ಯುಕ್ತನಾದನು.

ದಿಕ್ಕೇತೋಚದ ಶಾಮಣ್ಣನು ಸುಗುಣೆಯ ಕಾಲುಗಳನ್ನು ಗಟ್ಟಿಯಾಗಿ ಹಿಡಿದನು. ಸುಗುಣಾ! ಈಗಾಗಲೇ ಸಾಲಗಾರರ ಗಲಾಟೆಯು ಹೆಚ್ಚಾಗುತ್ತಾ ಬಂತು. ಇನ್ನು ಒಂದು ತಿಂಗಳೊಳಗಾಗಿ ಅಂಗಡಿಯು ನನ್ನ ಕೈಬಿಡುವುದು. ಕಷ್ಟ ಒಂದು ಕಡೆ, ನಷ್ಟ ಒಂದು ಕಡೆ, ನೀನೇ ಇದನ್ನು ಪರಿಹರಿಸಬೇಕಲ್ಲದೆ ಮತ್ಯಾರು ನನಗೆ ಸಹಾಯಕರೆಂದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಸುಗಣೆಯು ಶಾಮಣ್ಣನಿಗೆ ಮುಂದಿನ ಕಾರ್ಯವನ್ನು ಈಗ ಏನಾದರೂ "ನನ್ನಿಂದ ತಿಳಿದುಕೊ" ಎಂದು ಸಮಾಧಾನಪಡಿಸಿದಳು.

---

## ಚತುರ್ಥ ಪರಿಚ್ಛೇದ

"ನನ್ನಿಂದ ತಿಳಿದುಕೊ—ಸ್ತ್ರೀಸಹಾಯ"




ದರಿಯು ಬಹು ರಭಸದಿಂದ, ರಾಮುಲಾಲನೊಡನೆ ಪ್ರೇಮಸಂಭಾಷಣೆಯಾದ ಬಳಿಕ, ಮನೆಯ ಕಡೆ ಹೊರಟಳು. ವಾಚಕ ಮಹಾಶಯಾ! ಸುಂದರಿಗೇಕೆ ಶಾಮಣ್ಣನ ಮೇಲೆ ಇಷ್ಟು ಬೇಗ ಆಗ್ರಹ ಬಂತೆಂದು ತಾವು ಶಂಕಿಸಬಹುದು? ಅದು ಸಕಾರಣವಾಗಿಯೇ ಇದೆ. ಇದೆಲ್ಲಕ್ಕೂ ರಾಮುಲಾಲನ ಕೃತ್ರಿಮವೇ ಮುಖ್ಯ ಕಾರಣ. ಆದರೆ ಆ ತಪ್ಪು ತನ್ನ ಮೇಲೆ ಬರದಂತೆ, ಶಂಕರರಾಯನ ಮೇಲೆಯೇ ಹೊರಿಸಬೇಕೆಂದು ತನ್ನ ಕಾರ್ಯದಲ್ಲುದ್ಯುಕ್ತನಾಗಿದ್ದನು. ಅಂತೆಯೇ ಸುಂದರಿಯೂ ಈಗ ರಾಮುಲಾಲನ ಕೈಬೊಂಬೆಯಾಗಿ ಅವನ ಸೂತ್ರಕ್ಕನುಸಾರವಾಗಿ ಆಡತೊಡಗಿದಳು. ಶಾಮಣ್ಣನು ಸುಂದರಿಗೊಂದು ಅಮೌಲ್ಯವಾದ ಮುತ್ತಿನ ಹಾರವನ್ನು ತಂದುಕೊಡು

ವೆನೆಂದು ಹೇಳಿ ಎರಡು ದಿನಗಳಾಗಿದ್ದವು. ಅದು ಶೀಘ್ರವಾಗಿ ತಂದುಕೊಡದೆ ಒಂದೆರಡುದಿನಗಳು ಸಾವಕಾಶಮಾಡಿದ್ದೇ ಸುಂದರಿಗೆ ಮುಖ್ಯಕಾರಣವಾಗಿ ಅವನ ಮೇಲೆ ತಿರುಗಿಬಿದ್ದಳು ಎರಡನೆಯದಾಗಿ ಶ್ಯಾಮಣ್ಣನು ಸರಳೆಯೊಂದಿಗೆ ಮಾ ತಾಡುತ್ತಿದ್ದುದೂ ಒಂದು ತಪ್ಪಾಗಿ, ಸುಂದರಿಗೆ ಕಂಡುಬಂತು. ಇದರಿಂದ ತನ್ನ ಮೇಲಿನ ಮಮತೆಯು ಕಡಿಮೆಯಾಯಿತೆಂದು ತಿಳಿದಳು ಮೇಲಾಗಿ ರಾಮಲಾ ಲನ ದುರ್ಬೋಧನೆಗೊಳಗಾದಳು. ಅಂತೂ ಶ್ಯಾಮಣ್ಣನ ಮೇಲೆ ಸುಂದರಿಗೆ ಮತ್ಸರವು ಹುಟ್ಟಿ ಅವನನ್ನು ಜರಿಯಹತ್ತಿದಳು. ಅಂತೂ ರಾಮಲಾಲನ ದುರ್ಬೋಧನೆಯೇ ಸುಂದರಿಗೆ ಹೆಚ್ಚಾಯಿತಲ್ಲದೆ ತನಗೆ ಸೌಕರ್ಯವನ್ನು ಕಲ್ಪಿ ಸಿಕೊಟ್ಟ ಶ್ಯಾಮಣ್ಣನನ್ನು ಮರೆತಳು. ಭೋವಾಚಕಬೃಂದಾ! ನೋಡಿದಿರಾ ದುಷ್ಟ ಸ್ತ್ರೀಯರ ಸಹವಾಸದ ಪರಿಣಾಮವು. ಎದುವರಿಗೂ, ಪುರುಷನು ಸ್ತ್ರೀಹೃದಯವನ್ನರಿತು, ಬೇಕುಬೇಕಾದ್ದನ್ನು ತಂದುಕೊಡುವನೋ ಅದುವರಿಗೆ ಇಂತಹ ಸ್ತ್ರೀಯರ ಪ್ರೇಮವೇ ಹೊರತು ನಿಜವಾದ ಪ್ರೇಮವು ದೊರಕುವುದು ದುರ್ಲಭ. ಪಾಪ! ಶ್ಯಾಮಣ್ಣನ ಅಂಗಡಿಯ ಮಾಲುಗಳು ಅರಕ್ಕೆ ಮೂರಾಗಿ ಮಾರಲ್ಪಟ್ಟು ಪ್ರತಿದಿನವೂ ಸರಕುಗಳನ್ನು ಒದಗಿಸಿಕೊಟ್ಟವರ ಸಾಲವನ್ನು ತೀರಿಸುವುದೇ ದುರ್ಲಭವಾಗಿರುವಲ್ಲಿ ಇನ್ನು ಶ್ಯಾಮಣ್ಣನ ಕೈಗೆ ಪ್ರತಿದಿನದ ಆದಾಯವು ಬರುವುದೆಂತು? ಇದರಿಂದ ಶ್ಯಾಮಣ್ಣನಿಗೆ ಹಣ ಸಿಕ್ಕದೆ ಸುಂದರಿಗೆ ವಾಗ್ದಾನಕೊಟ್ಟಂತೆ ಮುತ್ತಿನ ಹಾರವನ್ನು ತಂದುಕೊಡಲು ಆಗಲಿಲ್ಲ. ಇದು ಆ ಪಾಪಿಗೆ ಹೇಗೆತಾನೇ ತಿಳಿದೀತು. ಇಂದು ಶ್ಯಾಮಣ್ಣನು ಸರಳೆಯ ಬುದ್ಧಿ ಚಾತುರ್ಯದಿಂದ ತನ್ನ ಅವಿವೇಕವನ್ನು ತಿಳಿದವನಾಗಿ ಅದಕ್ಕಾಗಿ ದುಃಖಪಡು ತ್ತಿದ್ದನು. ಇಂತಹ ಸಮಯದಲ್ಲಿ ಸುಂದರಿಯೊಡನೆ ಸಂಭಾಷಣೆಯನ್ನು ಅವಳು ಬಂದಿದ್ದಾಗ, ಹೇಗೆ ತಾನೆ ಮಾಡಿಯಾನು. ಇದರಿಂದ ಸುಂದರಿಗೆ ಮತ್ತಷ್ಟು ಕೋಪ ಹುಟ್ಟಿದಂತಾಗಿ ರಾಮಲಾಲನ ಇಲ್ಲದಸೊಲ್ಲದ ಮಾತುಗಳಿಗೆ ಮತ್ತಷ್ಟು ಗಮನ ಕೊಟ್ಟಳು.

ಇತ್ತ ರಾಮಲಾಲನು ಅಂದಿನ ಮಧ್ಯಾಹ್ನದ ಟಪಾಲನ್ನು ಓದುತ್ತಿರುವಲ್ಲಿ ತನ್ನ ವಿಳಾಸಕ್ಕೇ ಬಂದಿದ್ದ ಕಾಗದವೊಂದನ್ನು ಒಡೆದು ಓದಿಕೊಂಡನು. ಅದು ಶಂಕರರಾಯನು ಬರೆದ ಪತ್ರವಾಗಿತ್ತು. ಶ್ಯಾಮಣ್ಣನ ವ್ಯಾಪಾರವು ಹೀನಸ್ಥಿತಿಗೆ ಬಂದಿರುವ ವಿಷಯವನ್ನು ತಿಳಿದು ಸಂತೋಷಪಟ್ಟೆನೆಂತಲೂ, ಇನ್ನು ಒಂದು ತಿಂಗಳೊಳಗಾಗಿ ವ್ಯಾಪಾರವು ಅಭಿವೃದ್ಧಿಯಾಗದಿದ್ದಲ್ಲಿ ತನಗೇ ಅಂಗಡಿಯ ಯಾಜಮಾನ್ಯವು ಬರುವುದೆಂತಲೂ ಬರೆದಿದ್ದನು. ಅಂತೆಯೇ ರಾಮಲಾಲನಿಗೆ ಆಗ ಭಾರಿ ಹುದ್ದೆಯನ್ನು ಕೊಡುವೆನೆಂದೂ ಇನ್ನು ಹದಿನೈದು ದಿವಸಗಳೊಳ ಗಾಗಿ ತಾನು ಊರಿಗೆ ಬರುವಂತೆಯೂ ಸೂಚಿಸಿದ್ದನು. ಮುಂದೆ ತಾನು ಯಾವ

ಕಾರ್ಯವನ್ನು ತನ್ನ ಅನುಮತಿಯಿಲ್ಲದೇ ಮಾಡಲಾಗದೆಂದು ತಿಳಿಸಿದ್ದನು.

ಆದರೆ ರಾಮಲಾಲನಿಗೆ ಈ ಪತ್ರಾಭಿಪ್ರಾಯದಿಂದ ಮನಸ್ಸು ತೃಪ್ತಿಯಾಗಲಿಲ್ಲ. "ವಿನಾಶಕಾಲೇ ವಿಪರೀತಬುದ್ಧಿಃ" ಎನ್ನುವಂತೆ ತನ್ನ ಮನಸ್ಸಿಗೊಂದು ದುರಾಲೋಚನೆಯು ತಟ್ಟನೆ ಹೊಳೆಯಿತು (ತನ್ನ ಮನಸ್ಸಿನಲ್ಲೇ) ಹೇಗಾದರೂ ಇಂದು ನಾನು ಸುಂದರಿಯೊಡನೆ ಆಲೋಚಿಸಿದಂತೆ ಶಾಮಣ್ಣನಿಗೆ ವಿಷ ಕೊಟ್ಟು ಸಂಹರಿಸಿದರೆ ನನ್ನ ಮೇಲೆ ಅನುಮಾನವೇನಾದರೂ ಬಂದರೇನು ಮಾಡಲಿ ಅದಕ್ಕಾಗಿ ಈಗ ನಮ್ಮ ಶಂಕರರಾಯನ ಒಕ್ಕಣೆಯಲ್ಲಿ 'ಶ್ಯಾಮಣ್ಣನನ್ನು ಬೇಗನೆಯೇ ಸಂಹರಿಸು.' ಎಂಬ ಮಾತುಗಳನ್ನು [ಆ ಕಾಗದದಲ್ಲಿ] ಅವನ ಸ್ವಹಸ್ತದಂತೆ ಬರೆದರೆ ನನ್ನ ಕಾರ್ಯವು ಸಿದ್ಧಿಸಿದಂತಾಗುವುದು. ಒಂದು ವೇಳೆ ಶಂಕರರಾಯನು ನನಗೆ ಸಹಾಯಮಾಡದಿದ್ದಲ್ಲಿ ಸುಂದರಿಯೊಡನಾದರೂ ನಾನು ಸುಖಿಯಾಗಿರಬಹುದೆಂದು ತನ್ನ ಮನದಲ್ಲೇ ಹಿಗ್ಗಿದನು. ಶ್ಯಾಮಣ್ಣನು ಬದುಕಿದ್ದಲ್ಲಿ ಪುನಃ ಅವನು ಅಭಿವೃದ್ಧಿಗೆ ಬಂದರೆ ಸುಂದರಿಯೇನಾದರೂ ಅವನೊಡನೆ ಸೇರಬಹುದು ಆದ್ದರಿಂದ ಇದೇ ಉತ್ತಮಕಾರ್ಯ ಅಲ್ಲದೆ ಶಂಕರರಾಯನು ಹೆಚ್ಚು ಮಾತಾಡಲು ಬಂದರೆ ಅವನ ಸ್ವಹಸ್ತದಿಂದಿರುವ ಕಾಗದಗಳನ್ನು ಬಯಲಿಗೆ ತರುವೆನು. ಇದಕ್ಕಾದರೂ ಅಂಜಿ ನನಗೆ ಸಹಾಯ ಮಾಡುವನು ಎಂದು ಶಂಕರರಾಯನಿಂದ ಬಂದ ಕಾಗದದಲ್ಲಿ ಮೇಲೆ ಹೇಳಿದಂತೆ ಬರೆದನು. ಆಹಾ! ಇವರಲ್ಲಿ ನನ್ನ ಅಕ್ಷರಕ್ಕೂ ಶಂಕರರಾಯನ ಅಕ್ಷರಕ್ಕೂ ಸ್ವಲ್ಪವೂ ವ್ಯತ್ಯಾಸವೇ ಇರುವಂತಿಲ್ಲವೆಂದು ಹಿಗ್ಗಿದನು. ಇಷ್ಟು ಹೊತ್ತಿಗೆ ಕಾಲವು ಮೀರುತ್ತಾ ಬರಲು ಅಂಗಡಿಯಿಂದ ಹೊರಹೊರಟು ಸುಂದರಿಯ ಮನೆಗೆ ಬಂದನು.

ದುಃಖಸಾಗರದಲ್ಲಿ ಮುಳುಗಿದ ಶ್ಯಾಮಣ್ಣನನ್ನು ಸುಗುಣೆಯು ಸಂತೈಸಿದಳೆಂದು ಹಿಂದೆಯೇ ತಿಳಿಸಿದ್ದೆ. ಆದರೆ ಶ್ಯಾಮಣ್ಣನಿಗೆ ಒಂದೇ ಸಲ ಬಹು ದುಃಖವು ಪ್ರಾಪ್ತವಾಗಲು ಅದನ್ನು ಶಾಂತಗೊಳಿಸಲು ಸುಗುಣೆಯಿಂದಾಗಲಿಲ್ಲ. ಚತುರೆಳಾದ ಸರಳೆಯ ಮುಖವನ್ನೇ ಬಾರಿಬಾರಿಗೂ ನೋಡುತ್ತಿದನು. ಇನ್ನು ತನ್ನ ಹಿಂದಿನ ಕೃತ್ಯಕ್ಕಾಗಿ [ಅವಿವೇಕತನ] ಬಹು ದುಃಖವುಂಟಾಯಿತು. ಕೊನೆಗೆ ಸರಳೆಯು ಶ್ಯಾಮಣ್ಣನನ್ನು ಕುರಿತು ತಮ್ಮ ಮನೆಗೇ ಬರಬೇಕೆಂದು ತಿಳಿಸಿದಳು. ಶಾಮಣ್ಣನೂ ಒಪ್ಪಿದನು. ತರುವಾಯ ಎಲ್ಲರೂ ಮನೆಗೆ ಬಂದರು.

ಅಂದು ರಾತ್ರಿ ಊಟವಾದ ಬಳಿಕ ಶ್ಯಾಮಣ್ಣನು ಸುಗುಣೆ, ಸರಳೆ, ಮಿತ್ರರಾದ ಪುಷ್ಟಿ, ಶೆಟ್ಟರಿಂದೊಡಗೂಡಿ ಮುಂದಿನ ಕಾರ್ಯವನ್ನು ಆಲೋಚಿಸತೊಡಗಿದನು. ಕೊಂಚಹೊತ್ತು ಅಂಗಡಿಯ ಲಾಭನಷ್ಟಗಳನ್ನು ಶಾಮಣ್ಣನಿಗೆ ಚೆನ್ನಾಗಿ ಮನದಟ್ಟಾಗುವಂತೆ ಸುಗುಣೆಯು ತಿಳಿಸಿದಳು. ಬಹಳ ಹೊತ್ತು ಚರ್ಚೆ

ಯಾದ ಬಳಿಕ ಶ್ಯಾಮಣ್ಣನು ಮುಂದೇನುಮಾಡಬೇಕೆಂದು ಸುಗಣೆಯನ್ನು ಕೇಳಿದನು. ಸುಗುಣೆಯು, ಶ್ಯಾಮಣ್ಣಾ, ಮುಂದಿನ ಕಾರ್ಯಕಲಾಪಗಳನ್ನು "ನನ್ನಿಂದ ತಿಳಿದುಕೋ" ಎಂದು ಮೊದಲೇ ಹೇಳಿದ್ದೆನಲ್ಲವೇ ? ಅದರಂತೆ ನಡೆಯುವಿದ್ದಲ್ಲಿ ಇನ್ನೂ ಅನರ್ಥಗಳಿಗೆ ಗುರಿಯಾಗುವೆ, ಯೋಚಿಸು. ಎನ್ನಲು ಶಾಮಣ್ಣನು ಸುಗುಣಾ ಇನ್ನು ನಿನ್ನ ಮಾತಿನಂತೆ ನಡೆಯುವೆನು ಮುಂದಿನ ವಿಷಯವನ್ನು ತಿಳಿಸು, ಎಂದನು. ಆಗ ಸುಗುಣೆಯು ಶಾಮಣ್ಣಾ ! ಇನ್ನು ನಿನ್ನ ರಾಜಮಾನ್ಯದ ಅವಧಿಯು ಒಂದು ತಿಂಗಳು ಮಾತ್ರವಿರುವುದು. ಅದರೊಳಗಾಗಿ ಏನಾದರೊಂದು ಉಪಾಯಾಂತರದಿಂದ ಅಂಗಡಿಯು ಅಭಿವೃದ್ಧಿ ಸ್ಥಿತಿಯನ್ನು ತೋರಿಸದಿದ್ದಲ್ಲಿ ಅಂಗಡಿಯು ನಿನ್ನ ಕೈಬಿಡುವುದು. ಆದರಿಂದ 'ಇನ್ನು ಒಂದು ತಿಂಗಳು ವರೆಗೂ ಅಂಗಡಿಯು ರಿಪೇರಿಗಾಗಿ ಮುಚ್ಚಲ್ಪಟ್ಟಿರುತ್ತದೆ' ಎಂದು ಪ್ರಸಿದ್ಧಪತ್ರಿಕೆಯನ್ನು ಅಂಗಡಿಯ ಬಾಗಿಲಿಗೆ ಅಂಟಿಸಿ ಬಿಡೋಣ. ಇನ್ನು ಒಂದು ತಿಂಗಳೊಳಗಾಗಿ ಹೇಗಾದರೂ ಮಾಡಿ ಹೊಸಹೊಸಸರಕುಗಳನ್ನು ಶೇಖರಿಸೋಣ. ಬಾಗಿಲನ್ನು ತೆಗೆದಕೂಡ್ಲೇ ಅಂಗಡಿಯೂ ತುಂಬಿರುತ್ತದೆ. ಈಗ ಉಂಟಾಗಿರುವ ವ್ಯಾಪಾರದಲ್ಲಿನನಷ್ಟವು ಕಂಡುಬರುವುದಿಲ್ಲ. ಇದೆಂತಹ ಆಲೋಚನೆ ನೋಡಿದೆಯೊ ಎನ್ನಲು ಶಾಮಣ್ಣನಿಗೆ ಈಗ ಉಂಟಾಗಿರುವ ನಷ್ಟವು ಹೇಗೆ ಪರಿಹಾರವಾಗುವುದೆಂಬ ಸಂಶಯವು ಇನ್ನೂ ಬಿಡಲಿಲ್ಲ ಅದಕ್ಕಾಗಿ ಪುನಃ ಸುಗುಣೆಯನ್ನು ಕೇಳಿದನು. ಆಗ ಸುಗಣೆಯು ಶಾಮೂ ! ಹೆದರಬೇಡ ನೀನು ಇಷ್ಟು ಆಲೋಚನಾಪರನಾಗಿ ಮೊದಲೇ ಇದ್ದಿದ್ದರೆ ನಷ್ಟವು ಸಂಭವಿಸುತ್ತಿದ್ದಿಲ್ಲ. ಆದರೂ ನನಗೆ ದೈವದತ್ತವಾದ ಬುದ್ಧಿಚಾತುರ್ಯದಿಂದ ನಮ್ಮ ಅಂಗಡಿಯ ಸರಕನ್ನೆಲ್ಲವನ್ನೂ ವಿಮೆಮಾಡಿರುತ್ತೇನೆಯಾಗಿ ಈಗ ನಿನಗೆ ನಷ್ಟ ಕಂಡುಬಂದರೂ, ಪರಿಣಾಮದಲ್ಲಿ ಲಾಭಕರವಾಗುವುದು. ನೀನು ಹೆದರಬೇಡ ಎಂದು ಸಮಾಧಾನಪಡಿಸಿದಳು. ತರುವಾಯ ಶಾಮಣ್ಣನನ್ನು ಕುರಿತು ಶಾಮಣ್ಣ ನಾನು ಹೇಳಿದಂತೆ ನೀನು ನಡೆಯುತ್ತೀ ಎಂದು ವಚನಕೊಟ್ಟಿರುವೆ. ಆ ಮಾತನ್ನು ನೀನು ಮೀರಲಾಗದು. ಆ ಹಾಳು ಸುಂದರಿಯ ಸಂಗವನ್ನು ಬಿಡು. ನನ್ನ ತಂಗಿಯಾದ ಸರಳೆಯನ್ನು ವಿಧಿಪೂರ್ವಕ ಪಾಣಿಗ್ರಹಣಮಾಡಿಕೊ. ಸುಖವಾಗಿ ಬಾಳುವೆ ಎಂದು ಹೇಳಲು ಶಾಮಣ್ಣನು ಸರಳೆಯನ್ನು ದೃಷ್ಟಿಸಿ ನೋಡಿದನು ಸರಳೆಯು ನಾಚಿಕೆಯಿಂದ ತಲೆತಗ್ಗಿಸಿದಳು. ಪುನಃ ಸರಳೆಯು ಧೈರ್ಯದಿಂದ ತಲೆಯೆತ್ತಿ ಶಾಮಣ್ಣನನ್ನು ಕುರಿತು, ನಾನು ನಿನ್ನೆಯ ದಿನ ಅಂಗಡಿಯಲ್ಲಿ ಕೇಳಿದ್ದನ್ನು ನಡೆಸಿ ಕೊಡುವಂತೆ ವಾಗ್ದಾನವಿತ್ತಿರುವಿರಿ. ಇದೊ ಈಗ ಅದಕ್ಕೆ ಸಮಯವು ಒದಗಿದೆ. ನಮ್ಮಕ್ಕನ ಇಚ್ಛೆ (ತನ್ನನ್ನು ಲಗ್ನವಾಗುವುದು) ಯನ್ನು ಪೂರ್ಣಗೊ

ಳಿಸಿ ತನ್ನ ವಾಗ್ದಾನವನ್ನು ಕಾಪಾಡಿಕೊಳ್ಳಬೇಕೆನ್ನಲು, "ಹಾಗೆಂತೆಯೇ ಶಾಮಣ್ಣನೂ ಒಪ್ಪಿದನು. ಇಷ್ಟು ಹೊತ್ತಿಗೆ ಸರಿರಾತ್ರಿಯಾಗಲು ಎಲ್ಲರೂ ನಿದ್ರಾಜಲಧಿತರಂಗದಲ್ಲಿ ನೈಮರೆತು ಮಲಗಿದರು.

ಇತ್ತ ಸುಂದರಿಯೊಡನೆ ಸರಸಸಲ್ಲಾಪವಾಡುತ್ತಾ ರಾಮುಲಾಲನು ಆನಂದ ಸಾಗರದಲ್ಲಿ ಮುಳುಗಿದ್ದನು. ಎಷ್ಟೇ ಆದರೂ ವ್ಯಭಿಚಾರಿಣಿಯರ ಸ್ವಭಾವವು ಹೀಗೆಯೇ ಅಲ್ಲವೇ ? ಶಾಮಣ್ಣನು ಎಷ್ಟೋ ಪ್ರೇಮದಿಂದ ಸುಂದರಿಯೊಡನೆ ಸ್ವಲ್ಪಕಾಲ ಕಳೆದನು. ಈಗಲಾದರೋ, ಶಾಮಣ್ಣನಿಲ್ಲದಿದ್ದರೆ ಮತ್ತೊಬ್ಬ ವಿಟಪುರುಷನಿರುವುದರಿಂದ, ಸುಂದರಿಯು ಶಾಮಣ್ಣನ ಪ್ರೇಮಲತೆಯನ್ನು ಬೇರುಸಹಿತ ಕಿತ್ತೊಗೆದಳು. ಇಷ್ಟೇ ಅಲ್ಲದೆ ರಾಮುಲಾಲನ ಆಜ್ಞೆಯಂತೆ ಅವನು ಪುನಃ ತನ್ನ ಸಂದರ್ಶನಕ್ಕೆ ಬಂದಾಗ ಸಂಹರಿಸಬೇಕೆಂದೇ ಆಲೋಚಿಸಿದಳು. ಇದೆಂತಹ ಸ್ತ್ರೀ ಸ್ವಭಾವ ? ನೀವೇ ಆಲೋಚಿಸಿರಿ. ಅಂದುರಾತ್ರಿ ರಾಮುಲಾಲನು ವಿಶೇಷ ಹೊತ್ತು ಸುಂದರಿಯೊಡನೆ ಸಂಭಾಷಣೆಮಾಡುತ್ತಿದ್ದು, ಕೊನೆಗೆ ಹಾಗೆಯೇ ಮಲಗಿದನು.

ಪ್ರಾತಃಕಾಲವಾಯಿತು. ಶಾಮಣ್ಣನು ಬೆಳಗಿನ ಫಲಾಹಾರಾದಿಗಳನ್ನು ತೀರಿಸಿಕೊಂಡು ಮಿತ್ರರಿಂದೊಡಗೂಡಿ ಅಂಗಡಿಗೆ ಹೊರಡಲುದ್ಯುಕ್ತನಾದನು. ಸುಗುಣೆಯೂ ಅಂಗಡಿಗೆ ಹೊರಡಲನುವಾದಳು ತಕ್ಷಣವೇ "ಸರಳೆಯು" ಶ್ಯಾಮಣ್ಣನನ್ನು ಇಂದಿನಿಂದ ಇನ್ನು ಸ್ವಲ್ಪ ಕಾಲ ಈ ಮನೆಯನ್ನು ಬಿಟ್ಟು ಹೊರಗೆ ಎಲ್ಲಿಯೂ ಹೋಗಲಾಗದು. ನಮ್ಮಕ್ಕನಾದ ಸುಗುಣೆಯು ಅಂಗಡಿಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವಳು. ಎಂದಳು. ಶಾಮಣ್ಣನು ಏತಕ್ಕಾಗಿ ಹೀಗೆ ಸರಳೆಯು ತಡೆದದ್ದನ್ನು ನೋಡಿ ಸ್ವಲ್ಪ ಹೊತ್ತು ಯೋಚಿಸಿದನು. ಆದರೆ ಏನೂ ತಿಳಿಯಲಿಲ್ಲ. ಕೊನೆಗೆ ಸುಗುಣೆಯು ಹಾಗೆಯೇ ಯೋಚಿಸಿ, "ಸರಳೆಯು ಬುದ್ಧಿಶಾಲಿ, ಏನೋ ಅವಳ ಮಾತಿನಲ್ಲಿ, ಚಮತ್ಕಾರವಿದೆ" ಎಂದೂಹಿಸಿ ಶ್ಯಾಮಣ್ಣಾ ನೀನು ಇನ್ನು ಕೆಲವು ದಿವಸ ಹೀಗೆಯೇ ಅಜ್ಞಾತವಾಸ ಮಾಡುವುದರಲ್ಲಿ ಗುಣವಿದೆ ಇರಲಿ ನಿನ್ನ ಮಿತ್ರರಿಂದೊಡಗೂಡಿ ನಾನು ಅಂಗಡಿಗೆ ಹೋಗುವೆನು. ಸರಳೆಯೊಂದಿಗೆ ನೀನು ಇಲ್ಲಿಯೇ ಇರು. ನಾನು ನಿನಗೆ ತಿಳಿಸಿದಂತೆ ನಾಳೆಯಿಂದಲೇ ಅಂಗಡಿಯನ್ನು ಮುಚ್ಚುವಂತೇರ್ಪಡಿಸಿ ಕೆಲಸಗಾರರಿಗೆ ತಿಳಿಸುವೆನು ಎಂದು ಹೇಳಿ ಮನೆಯಿಂದ ಹೊರಟು ಅಂಗಡಿಗೆ ಬಂದಳು.

ಇತ್ತ ರಾಮುಲಾಲನೂ ಅಂಗಡಿಗೆ ಬಂದನು. ಎಷ್ಟು ಹೊತ್ತಾದರೂ ಶಾಮಣ್ಣನು ಬಾರದಿರುವುದನ್ನು ಕಂಡು ತಾನೂ ಸಂಶಯಕ್ಕೊಳಗಾದನು. ಮನಸ್ಸಿನಲ್ಲೇ ನನ್ನ ಗುಟ್ಟೇನಾದರೂ ಬಯಲಾಯ್ತೋ ಎಂದುಕೊಂಡನು. ಯಾವುದೂ

ತನಗೆ ತೋರಲಿಲ್ಲ. ಕೊನೆಗೆ ಹೇಗಾದರೂ ಮಾಡಿ ಶಂಕರರಾಯನನ್ನು ಕರೆಸಿಕೊಂಡು ಅವನೊಡನೆ ಮುಂದಿನ ಆಲೋಚನೆಯನ್ನು ಮಾಡೋಣವೆಂದು ಒಂದು ತಂತೀವರ್ತಮಾನವನ್ನು ಕೂಡಲೇ ಮುಂಬಯಿನಲ್ಲಿದ್ದ ಶಂಕರರಾಯನಿಗೆ ತನ್ನ (ಸುಂದರಿಯ) ಮನೆಗೆ ಬರುವಂತೆ ಬರೆದುಕಳುಹಿಸಿದನು.

ಇತ್ತ ಸುಂದರಿಯೂ ಕೂಡ, ಹಿಂದಿನ ರಾತ್ರಿ ಶಾಮಣ್ಣನು ತನ್ನ ಮನೆಗೆ ಬಾರದಿರುವುದನ್ನು ಕಂಡು, ನಿಶ್ಚಯವಾಗಿಯೂ ಸರಳೆಯನ್ನು ಮೋಹಿಸಿ ಅವಳ ಬಲೆಯಲ್ಲಿರುವನೆಂದು ತಿಳಿದುಕೊಂಡಳು. ಇದರಿಂದ ಮೊದಲೇ ಉರಿಯುತ್ತಿದ್ದ ಅವಳ ಕೋಪಾಗ್ನಿಗೆ ಮತ್ತಷ್ಟು ತುಪ್ಪವನ್ನು ಹುಯಿದಂತಾಯ್ತು. ತನ್ನ ಹಠವನ್ನು ಸಾಧಿಸಿಯೇ ತೀರುವೆನೆಂದು ಪ್ರತಿಜ್ಞೆಮಾಡಿದಳು.

ಸುಗುಣೆಯು ಅಂಗಡಿಯ ಅಂದಿನ ಮಧ್ಯಾಹ್ನದ ಕಾರ್ಯಕಲಾಪವನ್ನು ಪೂರೈಸಿಕೊಂಡು ಒಂದು ಸೂಚನಾಪತ್ರವನ್ನು ಎಲ್ಲರಿಗೂ ಕಳುಹಿಸಿದಳು. ಕೆಲಸಗಾರರಿಗೆ ಕೊಡಬೇಕಾಗಿದ್ದ ಅವರವರ ಸಂಬಳಗಳನ್ನು ಕೊಟ್ಟಳು. ಪುನಃ ಒಂದು ತಿಂಗಳ ತರುವಾಯ ಅವರುಗಳು ತಮ್ಮತಮ್ಮ ಕೆಲಸದ ಮೇಲೆ ಹಾಜರಾಗುವಂತೇರ್ಪಡಿಸಿದಳು. 'ರಿಪೇರಿಗಾಗಿ ಅಂಗಡಿಯು ಇಂದಿನಿಂದ ಒಂದು ತಿಂಗಳು ಮುಚ್ಚಲ್ಪಟ್ಟಿರುತ್ತದೆ' ಎಂದು ಒಂದು ದೊಡ್ಡಪತ್ರಿಕೆಯನ್ನು ಅಂಗಡಿಯ ಬಾಗಿಲಿಗೆ ಹಚ್ಚುವಂತೇರ್ಪಡಿಸಿ ತಾನು ಮನೆಗೆ ಬಂದಳು.

ಕಿಟ್ಟಪ್ಪಯ್ಯರೂ ಮನೆಗೆ ಬಂದು ಶಾಮಣ್ಣನಿಗೆ ಅಂದಿನ ಅಂಗಡಿಯ ಕಾರ್ಯಭಾರವನ್ನೆಲ್ಲಾ ತಿಳಿಸಿದರು. ಸುಗುಣೆಯು ಏರ್ಪಡಿಸಿರುವ ಕಾರ್ಯವು ಬಹು ಒಳ್ಳೆಯದೆಂದು ಆ ಮಂಕುಭಟ್ಟರೂ ತಿಳಿದುಕೊಂಡರು. ತರುವಾಯ ಎಲ್ಲರೂ ಭೋಜನಮಾಡಲು ತೆರಳಿದರು.

ಮುಂಬಯಿನಲ್ಲಿದ್ದ ಶಂಕರರಾಯನು ರಾಮುಲಾಲನ ತಾರನ್ನು [ತಂತಿ] ತೆಗೆದುಕೊಂಡು ಓದಿದನು ಒಮ್ಮೆಲೆ ಘಾಬರಿಗೊಂಡು, ಕಾರಣವನ್ನರಿಯದೆ ಅಂದಿನ ರಾತ್ರಿಯೇ ಬೊಂಬಾಯಿಯನ್ನು ಬಿಟ್ಟು ಶೃಂಗಾರಪುರಕ್ಕೆ ಹೊರಡುವಂತೆ ತೀರ್ಮಾನಿಸಿದನು.

ಶಾಮಣ್ಣನು ಭೋಜನಾನಂತರ, ಸರಳೆಯೊಂದಿಗೆ ಮಾತನಾಡುತ್ತಿದ್ದನು. ಸರಳೆಯು ನಾಚಿಕೆಯಿಂದ ತಲೆಬಗ್ಗಿಸಿಕೊಂಡು, ತನ್ನಪ್ರಿಯನ ಚಿತ್ರವೊಂದನ್ನು ಹಾಗೆಯೇ ಬರೆಯುತ್ತಿದ್ದಳು. ಎಷ್ಟೇ ಆದರೂ ನೈಜವಾದ ಪ್ರೀತಿಯೇ ಪ್ರೀತಿಯಲ್ಲವೇ? ಶಾಮಣ್ಣನು ಸರಳಾ ನಿನ್ನ ಮೋಹಪಾತಕ್ಕೆ ಒಳಗಾಗಿರುವೆನು. ನನ್ನಂತಹ ನಿರ್ಭಾಗ್ಯನನ್ನು ನೀನು ಕೈಹಿಡಿಯುವುದು ನಿಜವೇ ? ಎಂದನು. ಸರಳೆಯು ಪ್ರಿಯಾ! ತಾವು ಹೀಗೇಕೆ ಸಂಶಯಗ್ರಸ್ತರಾಗಿರುವಿರಿ ? ನಾನೇ ತಮ್ಮನ್ನು ನಮ್ಮಕ್ಕನ ಇಚ್ಛಾನುಸಾರವಾಗಿಯೂ, ನನ್ನ ಮನಸ್ಸಾಕ್ಷಿಯಾಗಿ

ಯೂ ತಮ್ಮನ್ನು ವರಿಸುವೆನೆಂದು ಈ ಮೊದಲೇ ತಿಳಿಸಿರಲಿಲ್ಲವೇ? ಅದು ಹಾಗಿರಲಿ. ಈಗ ತಾವು ಈ ಮನೆಯನ್ನು ಬಿಟ್ಟು, ಇನ್ನು ಸ್ವಲ್ಪ ಕಾಲ ಹೊರಗಡೆಯೇ ಹೋಗಬಾರದು. ಅಲ್ಲದೆ ಸುಂದರಿಯೊಡನೆ ಪುನಃ ಕಲೆಯಬಾರದು. ರಾಮಲಾಲನು ಮೋಸಗಾರನು. ಹಾಗೆ ನನ್ನ ಮಾತನ್ನುಲ್ಲಂಘಿಸಿ ತಾವು ಹೊರಗೆಹೋದರೆ ಅದರಲ್ಲಿ ಪ್ರಾಣಾಪಾಯವು ಸಂಭವಿಸಬಹುದು ಎಚ್ಚರಿಕೆಯಾಗಿರಿ. ಎಂದು ಹೇಳುತ್ತಾ, ಹಾಗೆಯೇ ತಾನು ಚಿತ್ರಿಸುತ್ತಿದ್ದ ಶಾಮಣ್ಣನ ಚಿತ್ರವನ್ನು ಪೂರೈಸಿ ಅವನ ಕೈಗೆ ಕೊಟ್ಟಳು.

ಶಾಮಣ್ಣನು ಬಹು ಅಂದವಾದ ಆ ಚಿತ್ರಪಟವನ್ನು ನೋಡಿ ಆನಂದ ಹೊಂದಿದನು. ಪುನಃ ಹಿಂದಿನ ಚಿತ್ರವನ್ನು ಸುಂದರಿಯು ತನ್ನ ಕೋಪಾಗ್ನಿಗೆ ಆಹುತಿ ಮಾಡಿದ್ದು ಜ್ಞಾಪಕಕ್ಕೆ ಬಂತು, ಅಂದು ಸುಂದರಿಯ ಕೃತ್ಯಕ್ಕಾಗಿ ಈಗ ತನ್ನನ್ನು ಕ್ಷಮಿಸುವಂತೆ ಸರಳೆಯನ್ನು ಬೇಡಿದನು. ಸರಳೆಯು ಮುಗುಳ್ನಗೆಯಿಂದ ನಾಥ ! ಅವಳಂತೂ ಅವಿವೇಕಿಯಾದರೆ ನಾನು ಅದರಂತೆ ನಡೆಯಲೇ? ಬಾಧಕವಿಲ್ಲ ಎನ್ನುವಷ್ಟರಲ್ಲಿ, ಸುಗುಣೆ ಆ ಕೊಠಡಿಗೆ ಬಂದಳು, ಸರಳೆಯೂ ಶಾಮಣ್ಣನೂ, ಮಾಮೂಲಿನಂತೆ, ಅವಳಿಗೆ ಮರ್ಯಾದೆ [illegible] ಸಲುವಾಗಿ ಎದ್ದು ನಿಂತರು, ಶಾಮಣ್ಣನ ಕೈಲಿದ್ದ ಚಿತ್ರವನ್ನು ಕಂಡು ಸುಗುಣೆಯು ಅದರ ಪಕ್ಕದಲ್ಲಿ "ಸರಳೆಯ" ಭಾವಚಿತ್ರವನ್ನು ಬರೆದಳು. ಸರಳೆಯು ತಲೆತಗ್ಗಿಸಲು ಸುಗುಣೆಯು ಶಾಮಣ್ಣ ನೋಡಿದೆಯಾ, ನಿಮ್ಮಿಬ್ಬರಿಗೂ ಎಂತಹ ಹೋಲಿಕೆಯು ಇರುವುದು. ಈ ರೀತಿ ನೈಜವೂ ನಿಸ್ವಾರ್ಥವೂ, ಆದ ಪ್ರೇಮವನ್ನು ಸತಿಪತಿಗಳು ಹೊಂದುವುದನ್ನು ಬಿಟ್ಟು [illegible], ಸಜ್ಜನನಿಂದ್ಯವೂ ಆದ ಕಾರ್ಯಕ್ಕೆ ನಿನ್ನಂಥವರು ಕೈಹಚ್ಚಬಹುದೇ? ಹಿಂದೆ ಆದದ್ದು ಆಗಿಹೋಯಿತು. ಇನ್ನು ಮುಂದೆ ನಿನ್ನ ಅಭಿವೃದ್ಧಿಯನ್ನು "ನನ್ನಿಂದ ತಿಳಿದುಕೊ." ಸರಳೆಯೂ ನೀನೂ ಸಂಭಾಷಣೆಯನ್ನು ಮಾಡುತ್ತಿರುವುದನ್ನು ನಾನು ಕೇಳಿದೆನು. ಅವಳ ಇಷ್ಟದಂತೆ ಮನೆಯನ್ನು ಬಿಟ್ಟು ಎಲ್ಲಿಯೂ, ಇನ್ನು ಕೊಂಚಕಾಲ ಹೋಗಬೇಡ. ನಿಮಗೆ ದೇವರು ಒಳ್ಳೆಯದನ್ನು ಮಾಡಲಿ ಎಂದು ಇಬ್ಬರಿಗೂ ಹರಸಿ ತನ್ನ ಇತರ ಕಾರ್ಯಗಳಿಗೆ ಹೊರಟುಹೋದಳು.

ಹೀಗೆಯೇ ಎರಡುಮೂರು ದಿನಗಳು ಕಳೆಯಿತು. ಮುಂಬಯಿಯಿಂದ ಬಂದ ಶಂಕರರಾಯನು ಈಗ ಸುಂದರಿಯ ಮನೆಯಲ್ಲೇ ಇದ್ದಾನೆ. ರಾಮಲಾಲನು ಕೈಕಾಲುಗಳನ್ನು ಹುಟ್ಟಿಸಿ ಅಂಗಡಿಯ ದುರವಸ್ಥೆಯ ವಿಷಯವನ್ನು ಶಂಕರರಾಯನಿಗೆ ತಿಳಿಸಿದನು. ಮತ್ತು ಮುಂದೆ ತಾನು ಮಾಡಲಿರುವ ಕಾರ್ಯವನ್ನು ಸೂಚಿಸಿದನು. ಆದರೆ ಶಾಮಣ್ಣನನ್ನು ಸಂಹರಿಸಬೇಕೆಂಬ ಇಷ್ಟವು ಶಂಕರರಾಯನಿಗಿರಲಿಲ್ಲ. ಆದ್ದರಿಂದ ರಾಮಲಾಲನ ಯೋಚನೆಗೆ ಸಮ್ಮತಿಸಲಿಲ್ಲ.

ಕಳಿಸಿದನು. ಕರುವಾಯ ರಾಮಲಾಲನೂ ಸುಂದರಿಯೂ ಶಂಕರರಾಯನನ್ನು ಒಂದು ಕೋಣೆಯಲ್ಲಿ ಹಾಕಿ ಬೀಗವನ್ನು ಹಾಕಿದರು.

ಇತ್ತ ಡ್ರೈವರನು ಶಾಮಣ್ಣನ ಮನೆಯ ಮುಂದೆ ಮೋಟಾರನ್ನು ನಿಲ್ಲಿಸಿ ಒಳಹೊಕ್ಕು ಶಾಮಣ್ಣನಿದ್ದ ಕೊಠಡಿಗೆ ಬಂದನು. ಸುಮಾರು ಮಧ್ಯಾಹ್ನ ಎರಡು ಘಂಟೆಯಿರಬಹುದು. ಮನೆಯಲ್ಲಿ ಎಲ್ಲರೂ ಬಿಸಲಿನ ತಾಪಕ್ಕಾಗಿ ಆಯಾಸಪಟ್ಟು ವಿಶ್ರಾಂತಿಯನ್ನು ಹೊಂದುತ್ತಲಿದ್ದರು. ಶಾಮಣ್ಣನೂ ಕೂಡ ಆರಾಮಕುರ್ಚಿಯಮೇಲೆ ಕುಳಿತು 'ಕರ್ಣಾಟಕ' ಪತ್ರಿಕೆಯೊಂದನ್ನು ಓದುತ್ತಲಿದ್ದನು. ಡ್ರೈವರನು ಬಂದು ಕಾಗದವನ್ನು ಕೊಟ್ಟನು. ಶಾಮಣ್ಣನು ಬಿಚ್ಚಿ ನೋಡಿದನು; ಅತ್ಯಂತ ಗೋಪ್ಯವಾಗಿರಲು ಒಬ್ಬರಿಗೂ ತಿಳಿಸಬಾರದೆಂದು ಓದಿ ಸಂತೃಪ್ತನಾದನು. ಕಾಗದವನ್ನು ಮೇಜಿನ ಮೇಲಿಟ್ಟು, ಮಲಗಿದ್ದ ತನ್ನ ಮಿತ್ರರನ್ನು ಎಚ್ಚರಗೊಳಿಸಿ ನನಗೆ ಮನೆಯಲ್ಲಿಯೇ ಇದ್ದು ಬೇಜಾರಾಗಿದೆ. ಸ್ವಲ್ಪ ಹೊತ್ತು ಹೊರಗಡೆ ಹೋಗಿ ಮೋಟಾರಿನಲ್ಲಿ ತಿರುಗಾಡಿಕೊಂಡು ಬರುತ್ತೇನೆಂದು ಹೇಳಿ ಮೋಟಾರಿನಲ್ಲಿ ಕುಳಿತುಕೊಂಡನು. ಅವಿವೇಕಿಯೆಂದರೆ ಶಾಮಣ್ಣನಿಗಿಂತ ಬೇರೆ ಅವಿವೇಕಿಯು ಸಿಕ್ಕುವನೇ? ಮಗಳೆಯೂ, ಸರಳೆಯೂ ಮನೆಯಿಂದ ಹೊರಗೆ ಹೋಗಬೇಡವೆಂದು ಗಿಣಿಗೆ ಹೇಳಿದಂತೆ ಹೇಳಿದರೂ ಕೇಳಿದನೇ? ಇವೆಲ್ಲ ಪ್ರಾರಬ್ಧ. ಅದೃಷ್ಟಕ್ಕೆ ಕಾರಣಕರ್ತರಾರು?

ಮೊದಲೇ ಸಿದ್ಧಪಡಿಸಿದ್ದಂತೆ ರಾಮಲಾಲನು, ಶಂಕರರಾಯನಿಗೆ ಮತ್ತೊಮ್ಮೆ ಎಚ್ಚರಿಕೆಯನ್ನಿತ್ತು ಶಾಮಣ್ಣನನ್ನು ಎದುರುನೋಡುತ್ತಾ, ದಿವಾನಖಾನೆಯಲ್ಲಿ ಕಾಣುವಂತೆ ಕುಳಿಸಿ ತಾನು ಮರೆಯಲ್ಲಿ ನಿಂತು ನೋಡುತ್ತಿದ್ದನು. ಶಂಕರರಾಯನ ಹಿಂಭಾಗದಲ್ಲೊಂದು ತೆರ. ಅದರ ಹಿಂದೆ ರಿವಾಲ್ವರು ಶಂಕರರಾಯನ ಬೆನ್ನಿಗೆ ತಾಕುವಂತೆ ಹಿಡಿದುಕೊಂಡು ರಾಮಲಾಲನು ನಿಂತಿದ್ದನು

ಇತ್ತ ಏಕಾಏಕಿ ಡ್ರೈವರನು ಮೋಟಾರನ್ನು ಸುಂದರಿಯ ಮನೆಯ ಮುಂದೆ ನಿಲ್ಲಿಸಿ ಶಾಮಣ್ಣನನ್ನು ಇಳಿದು ಒಳಹೋಗುವಂತೆ ಹೇಳಿದನು. ಶಾಮಣ್ಣನಿಗೆ ಭಯವುಂಟಾಯಿತು. ಡ್ರೈವರನು ನೋಡಿ, ಇದೇನು, ಶಂಕರರಾಯನು ಇಲ್ಲಿರುವನೇ? ಇದು ಸುಂದರಿಯ ಮನೆಯಲ್ಲವೇ? ನನ್ನನ್ನು ಮೋಸಗೊಳಿಸಿದೆಯಾ? ಬೇಗ ತಿಳಿಸು ಎನ್ನಲು, ಡ್ರೈವರನು ನೀವೇನೂ ಭಯಪಡಬೇಕಾದ್ದಿಲ್ಲ, ಧೈರ್ಯವಾಗಿ ಒಳಗೆ ಹೋಗಿ, ಶಂಕರರಾಯನನ್ನು ನೋಡುವಿರಿ, ಎನ್ನಲು, ಅಂತೆಯೇ ಅದೃಷ್ಟವೇ, ಎಂದುಕೊಂಡು ಒಳಹೊಕ್ಕನು. ಕೈಕಾಲುಗಳು ಅದರುವುದಕ್ಕಾರಂಭವಾಯಿತು ಪಾಪ. ಏನೂ ತಿಳಿಯದ ಅವಿವೇಕ ಶಿರೋಮಣಿ ಎಂದಮೇಲೆ ಭಯವಾಗುವುದು ಆಶ್ಚರ್ಯವೇ. ಅಂತೂ ಒಳಹೊಕ್ಕು ದಿವಾನಖಾನೆಯಲ್ಲಿ ತಪ್ಪು ಮೋರೆಯಿಂದ ಕೂತಿದ್ದ ಶಂಕರರಾಯನನ್ನು ಕಂ

ಮತ್ತನಾಗಿ ಜ್ಞಾನಶೂನ್ಯನಾದನು. ಇದೇ ಸಮಯವೆಂದು ಸುಂದರಿಯು ತಾನು ಯೋಚಿಸಿದ್ದ ಕಾರ್ಯಕ್ಕೆ ಕೈಹಚ್ಚಿದಳು.

ಇತ್ತ ಸರಳೆಯು ೩ ಘಂಟೆಯಾದ ಬಳಿಕ ಶಾಮಣ್ಣನನ್ನು ಫಲಾಹಾರಕ್ಕೆ ಕರೆಯುವುದಕ್ಕಾಗಿ ಅವನ ಕೊಠಡಿಗೆ ಬಂದಳು. ಶಾಮಣ್ಣನಿರಲಿಲ್ಲ. ಮಿತ್ರರಾದ ಪುಟ್ಟ-ಕಿಟ್ಟರು ಘೊರ್ರೆಂದು ಗೊರಕೆಯನ್ನು ಹೊಡೆಯುತ್ತಾ ನಿದ್ರಿಸುತ್ತಿದ್ದರು. ಒಮ್ಮೆಲೆ ಘಾಬರಿಗೊಂಡು ಕಿಟ್ಟಪುಟ್ಟರನ್ನು ಎಬ್ಬಿಸಿದಳು. ಅವರೇನು ಅಂತಹ ಗುಣಾಢ್ಯರೇ? ಶಾಮಣ್ಣನು ಎಲ್ಲಿಯೋ ಹೊರಗೆ ಮೋಟಾರಿನಲ್ಲಿ ಹಾರಾಡಿಕೊಂಡು ಬರುತ್ತೇನೆಂದು ಹೇಳಿ ಹೋದನು. ಒಂದು ಘಂಟೆಯಾಗುತ್ತಾ ಬಂತು. ನಮಗೇನು ಗೊತ್ತು? ಎಂದರು. ಚತುರಳಾದ ಸರಳೆಯು ಕೂಡ್ಲೆ ಏನೋ ಮೋಸವಾಯಿತೆಂದೂಹಿಸಿ ಅತ್ತಿತ್ತ ನೋಡುತ್ತ ಶಾಮಣ್ಣನ ಮೇಜಿನ ಬಳಿ ಬಂದಳು. ಅವಳ ದೃಷ್ಟಿಗೊಂದು ಕಾಗದವು ಗೋಚರವಾಯ್ತು. ಚಟ್ಟನೆ ಕಾಗದವನ್ನು ತೆಗೆದುಕೊಂಡು ಮಿಂಚಿನಂತೆ ಅಲ್ಲಿಂದ ಹಾರಿ ತನ್ನ ಕೊಠಡಿಗೆ ಬಂದಳು. ವಾಚಕ ಮಹಾಶಯರಿಗೆ ಆ ಕಾಗದವಾವುದೆಂಬುದನ್ನು ಮತ್ತೆ ನಾವು ತಿಳಿಸಬೇಕಾಗಿಲ್ಲ. ಡ್ರೈವರನು ಕೊಟ್ಟ ಕಾಗದವನ್ನು ಶಾಮಣ್ಣನು ಓದಿ ಮೇಜಿನಮೇಲೆಯೇ ಬಿಟ್ಟುಹೋದ ಪತ್ರವೇ ಅದು.

ಇನ್ನೇನು ಸುಂದರಿಯು ತನ್ನ ಕಾರ್ಯವು ಸಫಲವಾಯ್ತೆಂದುಕೊಂಡು ಎರಡು ಗಾಜಿನ ಪಾತ್ರೆಗಳಲ್ಲಿ ಮಾದಕಪಾನೀಯಗಳನ್ನು ತುಂಬಿ ಅದರೊಳಕ್ಕೆ ಒಂದು ಚಿಕ್ಕ ಶೀಸೆಯೊಳಗಿನ ಬಿಳಿಯ ಪುಡಿ (ವಿಷ) ಯನ್ನು ಸೇರಿಸಿ ಚೆನ್ನಾಗಿ ಕಲಕಿ ತೆಗೆದುಕೊಂಡು ಬಂದಳು. ಅಷ್ಟರಲ್ಲಿ ರಾಮಲಾಲನು ಜ್ಞಾನಶೂನ್ಯರಾದ ಶಂಕರರಾವ್ ಮತ್ತು ಶಾಮಣ್ಣನ ರುಜುವನ್ನು ಪತ್ರದಮೇಲೆ ಹಾಕಿಸಿದ್ದನು. ಸುಂದರಿಯು ಮಾದಕ ಪಾನೀಯವನ್ನು ತಂದು ಮೇಜಿನಮೇಲಿಟ್ಟಳು,

ಓರ್ವ ಯೌವನ ತರುಣನು, ಸ್ವಲ್ಪ ಕಾಲದಿಂದಲೂ ಮರೆಯಲ್ಲಿ ನಿಂತು. ಸುಂದರಿಯು ಮಾಡುತ್ತಲಿದ್ದ ಚರ್ಯೆಯೆಲ್ಲವನ್ನೂ ನೋಡುತ್ತ ಸುಮ್ಮನಿದ್ದನು. ಸುಂದರಿಯು ಮಾದಕದ್ರವದ ತಟ್ಟೆಯನ್ನು ಮೇಜಿನಮೇಲಿಟ್ಟು ಶಾಮಣ್ಣನಿಗೊಂದು ಬಟ್ಟಲು ಮಾದಕಪಾನೀಯವನ್ನೂ ಶಂಕರರಾಯನಿಗೊಂದನ್ನೂ ಕುಡಿಯುವುದಕ್ಕಾಗಿ ಕೊಟ್ಟಳು. ಜ್ಞಾನಶೂನ್ಯರಾಗಿ ಆ ಮೋಸಜಾಲದಲ್ಲಿ ಸಿಕ್ಕಿಬಿದ್ದ ಎರಡು ವ್ಯಕ್ತಿಗಳೂ ಹೇಗೆ ತಾನೇ ಸುಂದರಿಯ ಕಪಟವನ್ನು ತಿಳಿದಾರು? ಇನ್ನೇನು ಬಟ್ಟಲನ್ನು ಮೇಲಕ್ಕೆತ್ತಿ ಕುಡಿಯಬೇಕು. ಅಷ್ಟರೊಳಗಾಗಿ ಮೇಲೆ ಹೇಳಿದ ಸುಂದರ ತರುಣನು ತನ್ನ ಕೈಲಿದ್ದ ಕೈ ಬಂದೂಕದ (ರಿವಾಲ್ವರ್) ಗುಂಡೊಂದನ್ನು ಹಾರಿಸಿದನು. ಎಲ್ಲರಿಗೂ ಆಶ್ಚರ್ಯವೂ ಭಯವೂ ಏಕಕಾಲದಲ್ಲುಂಟಾಯ್ತು. ಏನಿರಬಹುದೆಂದು ಬಿಟ್ಟ ರೆಪ್ಪೆಯಿಂದದೂ,

ನೆಟ್ಟ ದೃಷ್ಟಿಯಿಂದಲೂ ನೋಡಲು ಮುಂದೆ ಈರ್ವರು ಸಿಪಾಯಿಗಳು ನಿಂತಿದ್ದಾರೆ. ರಾಮಲಾಲನೂ, ಸುಂದರಿಯೂ ಇವರಾರು ? ಇಲ್ಲಿ ಹೇಗೆ ಬಂದರು ? ಮುಂದೇನುಗತಿ ಎಂದು ಭಯವಿಹ್ವಲರಾದರು. ಅಷ್ಟುಹೊತ್ತಿಗೆ ಕಿಟ್ಟಪುಟ್ಟರಿಂದೊಡಗೂಡಿ ಒಬ್ಬ ವೈದ್ಯನು ಮುಂದೆ ಬಂದು ಶಾಮಣ್ಣನ ಮತ್ತು ಶಂಕರರಾಯನ ಕೈಲಿನ ಗಾಜಿನ ಬಟ್ಟಲಲ್ಲಿದ್ದ ಮಾದಕದ ನೀರನ್ನು ಪರೀಕ್ಷಿಸಲು ಅದು ಕಾಳಕೂಟದ ವಿಷದಿಂದ ಮಿಶ್ರಿತವಾಗಿತ್ತು. ತಕ್ಷಣ ರಾಮಲಾಲನನ್ನೂ ಸುಂದರಿಯನ್ನು ಕೈಸೆರೆ ಹಿಡಿಯುವಂತೆ ಆ ಸುಂದರ ತರುಣನು ಆಜ್ಞಾಪಿಸಲು ಅದರಂತೆಯೇ ಆ ಈರ್ವರನ್ನೂ ಸಿಪಾಯಿಗಳು ಕೈಸೆರೆ ಹಿಡಿದು ಬಂದೀಖಾನೆಗೆ ಒಯ್ದರು.

ವಾಚಕಮಹಾಶಯರಾ, ಆ ಸುಂದರ ತರುಣನಾರು? ವೈದ್ಯನು ಹೇಗೆ ಬಂದನು. ಕಿಟ್ಟಪುಟ್ಟರು ಹೇಗೆ ಬಂದರೆಂಬುದನ್ನು ತಿಳಿಯಲು ತಮ್ಮ ಮನಸ್ಸು ಕಾತರಪಡಬಹುದಲ್ಲವೆ?

ಇತ್ತ ಸರಳೆಯು ಶಾಮಣ್ಣನ ಜೊತೆಯನ್ನು ಬಿಟ್ಟು ತನ್ನ ಕೋಣೆಗೆ ಬಂದಳೆಂದು ಹಿಂದೆಯೇ ತಿಳಿಸಿದ್ದೆ. ಅವಳು ಸಹಜವಾಗಿಯೂ ಪಲ್ಲವೂ ಸುಂದರಿಯ ಮತ್ತು ರಾಮಲಾಲನ ದುರಾಲೋಚನೆಯಿಂದೇ ಊಹಿಸಿ ಕೂಡಲೇ ಗಂಡಸಿನಂತೆ ಪೋಷಾಕನ್ನು ಧರಿಸಿ ತನ್ನ ಜತೆಯಲ್ಲಿ ಕಿಟ್ಟಪುಟ್ಟರನ್ನು ಕರೆದುಕೊಂಡು ಠಾಣೆಗೆ ಬಂದಳು. ಠಾಣೆಯಿಂದ ಇಬ್ಬರು ಸಿಪಾಯಿಗಳನ್ನು ತನ್ನ ಸಹಾಯಕ್ಕಾಗಿ ಕರೆದುಕೊಂಡು, ಕಿಟ್ಟಪುಟ್ಟರಿಗೆ ಓರ್ವ ವೈದ್ಯನನ್ನು ಶೀಘ್ರವಾಗಿ ಕರೆತರುವಂತೆ ನೇಮಿಸಿ ಸುಂದರಿಯ ಮನೆಯ ಪತ್ತೆಯನ್ನು ತಿಳಿಸಿ ತಾನು ಬಂದಿದ್ದಳು. ನೋಡಿದಿರಾ ! ಆ ಸುಂದರ ತರುಣನೇ ನಮ್ಮ ಕಥಾನಾಯಕಿಯಾದ ಸರಳಕುಮಾರಿ. ತನ್ನ ಗಂಡುವೇಷವನ್ನು ಒತ್ತಟ್ಟಿಗಿಟ್ಟು ಶಾಮಣ್ಣನ ಎದುರಿಗೆ ನಿಂತಳು. ಶಾಮಣ್ಣನು ಈ ಗದ್ದಲದಿಂದ ಸ್ವಲ್ಪ ಚೇತರಿಸಿಕೊಂಡಿದ್ದನು. ಸರಳಕುಮಾರಿಯ ಸಮಯೋಚಿತ ಬುದ್ಧಿಗಾಗಿ ಬಹಳ ಸಂತೋಷಿಸಿ ಅವಳನ್ನು ಅಪ್ಪಿಕೊಂಡನು. ತನಗೆ ಮನೆಯನ್ನು ಬಿಟ್ಟು ಹೊರಗೆ ಹೋಗಬೇಕೆಂದು ತಿಳಿಸಿದ ದರಿಂದ ಒದಗಿ ಬಂದ ತಪ್ಪುಗಳನ್ನು ಕ್ಷಮಿಸೆಂದು ಬೇಡಿದನು. ಸರಳಕುಮಾರಿಯು ಶಾಮಣ್ಣ, ಇಂದು ದೈವ ಪಾಲಿಸಿದಂತೆ ನಿನ್ನ ಪ್ರಾಣ ಉಳಿಯಿತು. ಈಗಲಾದರೂ ನನ್ನ ಮಾತನ್ನು ನಂಬು. ಬಿಟ್ಟ ಪಾಪವನ್ನು 'ನನ್ನಿಂದ ತಿಳಿದುಕೋ' ಏಳು ತಡಮಾಡಬೇಡ. ಸುಗುಣೆಯು ಮನೆಯಲ್ಲಿ ನಿನಗಾಗಿ ಕಾದಿರುವಳು ಎಂದಳು. ಅಷ್ಟರಲ್ಲಿ ಶಂಕರರಾಯನನ್ನು ನೋಡಿ ಆತನಿಗೆ ಉಪಚರಿಸಿದಳು. ಶಂಕರರಾಯನು ಯಾವ ಮಾತೂ ಆಡದೆ ಸರಳೆಯ ಹಿಂದೆಯೇ ತಾನೂ ಮನೆಗೆ ಹೊರಟನು.

ಶಂಕರರಾಯನು ಸುಗುಣೆಯನ್ನು ಕಂಡು ತನ್ನ ತಪ್ಪನ್ನು ಮನ್ನಿಸಬೇಕೆಂದು ಕೇಳಿದನು. ತನ್ನ ಅವಿವೇಕಕ್ಕಾಗಿ ಬಹು ಪಶ್ಚಾತ್ತಾಪಪಟ್ಟನು. ಸುಗುಣೆಯು ಪತಿಯೇ ದೈವವೆಂದು ತಿಳಿದು ಆತನ ಪಾದಕ್ಕೆರಗಿ ತಪ್ಪನ್ನು ದೇವರೇ ಮನ್ನಿಸುವನೆಂದು ಹೇಳಿ ಶಾಮಣ್ಣಾ ! ಈಗಲಾದರೂ ನಿನಗೆ ತಿಳಿಯಿತೋ ಎಂದನು. ಶಾಮಣ್ಣನು ಸುಗುಣೆಯ ಅಲೌಕಿಕ ವ್ಯಾಪಾರಕ್ಕೂ ಸರಳೆಯ ಬುದ್ಧಿಚಾತುರ್ಯ ಮತ್ತು ಸಮಯೋಚಿತ ಸಹಾಯಕ್ಕೂ ಸಂತೋಷಪಟ್ಟು ತನ್ನ ದುಃಖವನ್ನು ಮರೆತನು. ಇದೇ ಅಲ್ಲವೇ ನಿಜವಾದ ಸ್ತ್ರೀ ಸಹಾಯ? ಕಿಟ್ಟಿಪುಟ್ಟಿಯರೂ ಕೂಡ ಅತ್ಯಂತ ಹರ್ಷಪಟ್ಟು ಅವರೂ ಒಳ್ಳೆಯ ಬುದ್ಧಿಶಾಲಿಗಳಾಗಲು ಪ್ರಯತ್ನಪಟ್ಟರು. ಅಂತೂ ಸರ್ವರೂ ಆನಂದ ಜಲಧಿಯಲ್ಲಿ ಮನಗಣೆಯ ಪವರೆಗೂ ಮುಳುಗಿದರು.

---

## ಉಪಸಂಹಾರ

ಪ್ರಾತಃಕಾಲ, ರಾಮುಲಾಲನನ್ನೂ ಸುಂದರಿಯನ್ನೂ ಕೋರ್ಟಿಗೆ ವಿಚಾರಣೆಗಾಗಿ ತಂದರು. ಸುಗುಣೆಯು, ಶಂಕರರಾಯ ಶಾಮಣ್ಣ, ಸರಳೆ, ಕಿಟ್ಟಿಪುಟ್ಟಿಯರಿಂದಲೂ ಕೂಡಿ ತಾನೂ ಬಂದಳು. ವಕೀಲ ವಾಸುದೇವರಾಯರೂ ಬಂದರು. ವಿಚಾರಣೆಗೆ ಪ್ರಾರಂಭವಾಯಿತು. ಶಂಕರರಾಯನು ತನ್ನ ತಪ್ಪನ್ನು ಒಪ್ಪಿಕೊಂಡು ಅದಕ್ಕಾಗಿ ಕ್ಷಮಾಪಣೆಯನ್ನು ಕೇಳಿದನು. ಶಾಮಣ್ಣನೂ ಆತನನ್ನು ಕೋರ್ಟಿನವರು ಕ್ಷಮಿಸುವಂತೆ ಪ್ರಾರ್ಥಿಸಿದನು. ತರುವಾಯ ಎಲ್ಲರ ವಿಚಾರಣೆಯೂ ಆದನಂತರ, ನ್ಯಾಯಾಧೀಶನು ರಾಮುಲಾಲನಿಗೂ, ಸುಂದರಿಗೂ ಗಡೀಪಾರು ಶಿಕ್ಷೆಯನ್ನು ವಿಧಿಸಿದನು. ಸುಂದರಿಯ ಆಸ್ತಿಯೂ ಮತ್ತು ಕೇಶವಲಾಲನ ವಿಲ್ಲಿನ ಪ್ರಕಾರ ಮಿಕ್ಕ ೬೦ ಲಕ್ಷ ರೂಪಾಯಿಗಳೂ ಶಾಮಣ್ಣನಿಗೆ ಬರುವಂತಾಯಿತು. ವಾಸುದೇವರಾಯರೂ ಶಾಮಣ್ಣನನ್ನು ಆಶೀರ್ವದಿಸಿದರು. ತರುವಾಯ ಎಲ್ಲರೂ ಮನೆಗೆ ಬಂದರು

ಮಾರನೇ ದಿವಸವೇ ಅಂಗಡಿಯ ಬಾಗಿಲನ್ನು ತೆಗೆಸಿ ಶಂಕರರಾಯನು ತನ್ನ ಸ್ನೇಹಿತರೆಲ್ಲರಿಗೂ ಸರಕುಗಳನ್ನು ಕಳಿಸುವಂತೆ ಕಾಗದಗಳನ್ನು ಬರೆದನು. ಪುನಃ ಶಾಮಣ್ಣನು ಶಂಕರರಾಯನನ್ನು ಅಂಗಡಿ ಮ್ಯಾನೇಜ (ಕಾರ್ಯದರ್ಶಿ)ರನ್ನಾಗಿ ಮಾಡಿದನು. ವ್ಯಾಪಾರವು ದಿನಕ್ರಮೇಣ ಅಭಿವೃದ್ಧಿಸ್ಥಿತಿಯನ್ನು ಹೊಂದುತ್ತಾ ಬಂತು. ಕಿಟ್ಟಿಪುಟ್ಟಿಯರನ್ನು ವ್ಯಾಪಾರ ವಿಷಯದಲ್ಲಿ ಚತುರರಾಗುವಂತೆ ಶಂಕರರಾಯನೂ ಶಾಮಣ್ಣನೂ ಸಹಾಯ ಮಾಡಿದರು. ಒಂದು ದಿನ

ಶಾಮಣ್ಣನು ಸರಳೆಯನ್ನು ನೋಡಿ ಇನ್ನೂ ಎಷ್ಟು ದಿನಗಳು ನಾವು ಹೀಗೆಯೇ ಇರುವುದು. ಸುಗುಣೆಯು, ಏನನ್ನುವಳೋ ಎಂದು ಚಿಂತಿಸುತ್ತಿರಲು, ಇವರ ಮನೋಭಿಪ್ರಾಯವನ್ನು ಅರಿತು, ಶ್ಯಾಮಣ್ಣಾ, ಅದನ್ನು "ನನ್ನಿಂದ ತಿಳಿದುಕೋ" ಎಂದು ಹೇಳಿ, ನಾಳೆಯೇ ನಿಮ್ಮಿಬ್ಬರ ಕಲ್ಯಾಣವಾಗಲಿ ಎಂದು ಸರ್ವವನ್ನೂ ಸಿದ್ಧಪಡಿಸಿದಳು. ಅತಿ ವಿಜೃಂಭಣೆಯಿಂದ ಶುಭಮುಹೂರ್ತದಲ್ಲಿ ಸರಳೆಗೂ ಶಾಮಣ್ಣನಿಗೂ ಪಾಣಿಗ್ರಹಣವು ನೆರವೇರಿತು. ಸತಿಪತಿಗಳು ಅನ್ಯೋನ್ಯವಾಗಿ ನಮ್ಮ ಭಾರತಪುತ್ರ-ಪುತ್ರಿಯರಿಗೆ ಮಾದರಿಯಾಗಿದ್ದರು.

ಕೆಲವಂ ಬಲ್ಲವರಿಂದೆ ಕಲ್ತು । ಕೆಲವಂ ಶಾಸ್ತ್ರಂಗಳಿಂ ಕೇಳ್ದು ತಾಂ ।
ಕೆಲವಂ ಮಾಳ್ಪವರಿಂದೆ ಕಂಡು । ಕೆಲವಂ ಸುಜ್ಞಾನದಿಂ ನೋಡುತಂ ॥
ಕೆಲವಂ ಸಜ್ಜನ ಸಂಗದಿಂದಮರಿಯಲ್ । ಸರ್ವಜ್ಞನಪ್ಪಂತೆ ಕೇಳ್ ।
ಪಲವುಂ ಪಳ್ಳ ಸಮುದ್ರವೈ । ಹರಹರಾ ಶ್ರೀಚನ್ನಸೋಮೇಶ್ವರಾ ॥

ಎಂಬಂತೆ ನಾವು ಕೈಲಾದಮಟ್ಟಿಗೂ ನಮಗೆ ತಿಳಿದುದನ್ನು ಅನೇಕರಿಂದ ತಿಳಿದು ಕಾರ್ಯವನ್ನು ಸಾರ್ಥಕಗೊಳಿಸುವುದು ಒಳ್ಳೆಯದಲ್ಲವೇ?

ಸಂಪೂರ್ಣಂ.

---

